# ರಾಮಾಯಣ

ಡಾ. ವಿಜಯಾ ಸುಬ್ಬರಾಜ್



RAMAYANA - A Articles

Written by
**Dr. Vijaya Subbaraj**
No. 51, Hamsi, Ist 'A' Cross
35th Main
Banagiri nagara
Banashankari 3rd Stage
Bangalore - 560 085
Mobile : 99869 28876

Published by
**Akshara Mandira**
No. 277/3, 5th Cross
Vidhana Soudha Extn.,
Laggere
Bangalore - 560 058



First Impression : 2015
Price : ₹ 80/-
Pages : iv + 104 = 108
Paper Used : 80 GSM Maplitho
Book Size : 1/8th Demmy

Printed by
**Shakthi Printers & Publishers**
Bengaluru- 560 058

## ಮೊದಲ ಮಾತು

ರಾಮಾಯಣ, ಮಹಾಭಾರತಗಳು ನಮ್ಮ ದೇಶಧ ಮಹತ್ವದ ಮಹಾಕಾವ್ಯಗಳು; ನಮ್ಮ ಸಂಸ್ಕೃತಿಯ ಪ್ರತೀಕಗಳು; ಸೃಜನಶೀಲ ಮನಸ್ಸುಗಳಿಗೆ ಚಿರಂತನ ಪ್ರೇರಣೆಗಳು! ಮಹಾಭಾರತಕ್ಕಿಂತ ಮೊದಲು ರಚಿತವಾಗಿರುವುದು ರಾಮಾಯಣ, ರಾಮಾಯಣ ಕಾವ್ಯವು, ಸತ್ಯ, ಪ್ರಾಮಾಣಿಕತೆ, ಸ್ನೇಹ, ಪ್ರೀತಿ, ಸೋದರ ವಾತ್ಸಲ್ಯ, ವಿನಯ ವಿಧೇಯತೆ, ಧಾರ್ಮಿಕತೆ, ನ್ಯಾಯ ಮತ್ತು ಇನ್ನೂ ಹಲವು ಬಗೆಯ ಮೌಲ್ಯಗಳನ್ನು ಬಿಂಬಿಸುತ್ತದೆ. ಈ ಕಾವ್ಯದ ನಾಯಕ ಇಂತಹ ಮೌಲ್ಯಗಳನ್ನು ಪ್ರತಿನಿಧಿಸುತ್ತಾನೆ. ಆತ ದೇವರಲ್ಲ ಆದರೆ ತನ್ನ ನಡತೆ, ಚಾರಿತ್ರ್ಯಗಳಿಂದ ದೈವತ್ವಕ್ಕೆ ಏರಿದ ಆದರ್ಶ ಮಾನವ. ವಿಶ್ವವೇ ಅವನಿಗೆ ಗೌರವದಿಂದ ತಲೆಬಾಗುತ್ತದೆ.

ರಾಮಾಯಣಕ್ಕೆ ಬೇರೆ ಬೇರೆ ಆವೃತ್ತಿಗಳಿವೆ; ವ್ಯಾಖ್ಯಾನಗಳಿವೆ. ಒಬ್ಬೊಬ್ಬ ಕವಿಯೂ ತನ್ನದೇ ಆದ ರೀತಿಯಿಂದ ವ್ಯಾಖ್ಯಾನಿಸಿ, ವಿಭಿನ್ನವಾದ ದೃಷ್ಟಿಯಿಂದ ಬರೆದಿದ್ದಾನೆ. ಇಷ್ಟೊಂದು ಸಂಖ್ಯೆಯಲ್ಲಿ ರೂಪಗಳಲ್ಲಿ ಲಭ್ಯವಿರುವ ರಾಮಾಯಣ ಸಮೂಹಕ್ಕೆ ಈಗ ನನ್ನದೂ ಒಂದು ಸೇರ್ಪಡೆಯಾಗಿದೆ. ರಾಮಾಯಣವನ್ನು ಮತ್ತೊಮ್ಮೆ ಬರೆಯುವ ಉದ್ದೇಶ, ರಾಮನ ವ್ಯಕ್ತಿತ್ವ ನಮ್ಮ ಕಿರಿಯ ಗೆಳೆಯರಿಗೆ ಮತ್ತು ವಿದ್ಯಾರ್ಥಿಗಳಿಗೆ

ಪರಿಚಯವಾಗಿ ಅವನ ಆದರ್ಶಗಳು, ಅವರಿಗೆ ಮಾರ್ಗದರ್ಶಕವಾಗಲಿ ಎಂಬುದು. ಅದಕ್ಕಾಗಿಯೇ ರಾಮಾಯಣ ಕತೆಯನ್ನು ಆದಷ್ಟೂ ಸರಳ ಭಾಷೆಯಲ್ಲಿ, ಯಾವುದೇ ಸಂಕೀರ್ಣತೆಗೆ ಎಡೆಯಿಲ್ಲದಂತೆ, ತಾತ್ವಿಕ ಚರ್ಚೆಗಳನ್ನು ದೂರವಿಟ್ಟು, ಕತೆಯ ಎಳೆಯನ್ನು ಮಾತ್ರವೇ ಉಳಿಸಿಕೊಂಡು ಬರೆಯಲಾಗಿದೆ.

ನಮ್ಮ ಸಂಸ್ಕೃತಿಯತ್ತ ಕಿರಿಯ ಗೆಳೆಯರ ದೃಷ್ಟಿ ಹರಿಸಲು ಈ ಕೃತಿ ರಚನೆಯಾಗಿದೆ.

ಈ ಕೃತಿಯನ್ನು ಪ್ರಕಟಿಸುತ್ತಿರುವ ಅಕ್ಷರ ಮಂದಿರದ ಗೆಳೆಯರಿಗೆ ಮತ್ತು ಅಂದವಾಗಿ ಮುದ್ರಿಸಿದ ಮುದ್ರಕರಿಗೆ, ಮುಖಪುಟ ರಚಿಸಿಕೊಟ್ಟ ಕಲಾವಿದರಿಗೆ ಅಭಾರಿಯಾಗಿದ್ದೇನೆ.

ರಾಮಾಯಣದಂತಹ ಮಹಾಕಾವ್ಯವನ್ನು ಮತ್ತೊಮ್ಮೆ ಓದಲು ಮತ್ತು ಈ ಕಿರುಪುಸ್ತಕವನ್ನು ಬರೆಯಲು ಪ್ರೋತ್ಸಾಹಿಸಿದ ಮತ್ತು ಆಕರ್ಷಕವಾಗಿ ಕೃತಿಯನ್ನು ರೂಪಿಸಿದ ಎಲ್ಲರಿಗೂ ಮತ್ತೊಮ್ಮೆ ನನ್ನ ಕೃತಜ್ಞತೆಗಳು.

**– ಡಾ. ವಿಜಯಾ ಸುಬ್ಬರಾಜ್**

# ರಾಮಾಯಣ

## ರಾಮಾಯಣ ಪ್ರವೇಶಕ್ಕೆ ಮೊದಲು

ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿಸುವ ಎರಡು ಮಹಾ ಕಾವ್ಯಗಳೆಂದರೆ ರಾಮಾಯಣ ಮತ್ತು ಮಹಾಭಾರತ. ರಾಮನ ಆದರ್ಶ ವ್ಯಕ್ತಿತ್ವವನ್ನು ನಿರೂಪಿಸುವ ರಾಮನ ಕತೆಯನ್ನು ಕೇಳದವರು ಬಹುಶಃ ಇರಲಾರರು.

ರಾಮಾಯಣದ ಕಥಾನಾಯಕನಾದ ರಾಮ ಒಬ್ಬ ಆದರ್ಶ ಮಾನವ. ತನ್ನ ಶೌರ್ಯ, ಸಾಹಸ, ಆದರ್ಶಗಳಿಂದಾಗಿ ವಿನಯ, ವಿಧೇಯತೆ, ಸೋದರ ಪ್ರೇಮ, ಗುರು ಹಿರಿಯರ ಬಗೆಗಿನ ಗೌರವಗಳಿಂದಾಗಿ ದೈವತ್ವಕ್ಕೆ ಏರಿದವನಾದ.

ಇಂತಹ ಆದರ್ಶ ಮಾನವನನ್ನು ಕುರಿತು ವಾಲ್ಮೀಕಿ ಮಹರ್ಷಿಗಳು ರಾಮಾಯಣವನ್ನು ಅಂದರೆ ರಾಮನ ಜೀವನಗಾಥೆಯನ್ನು ಬರೆದರು. ಆದರೆ ಅವರಿಗೆ ಪ್ರೇರಣೆ ಪ್ರಚೋದನೆಗಳು ದೊರೆತದ್ದು ನಾರದ ಮಹರ್ಷಿಗಳಿಂದ.

ಒಮ್ಮೆ ನಾರದರು ಮಹರ್ಷಿ ವಾಲ್ಮೀಕಿಗಳನ್ನು ಕಾಣಲು ಅವರ ಆಶ್ರಮಕ್ಕೆ ಬಂದರು. ಉಭಯ ಕುಶಲೋಪರಿಯಾದ ಮೇಲೆ ವಾಲ್ಮೀಕಿ ಮಹರ್ಷಿಗಳು ಇದ್ದಕ್ಕಿದ್ದಂತೆ ನಾರದ ಮಹರ್ಷಿಗಳನ್ನು, "ಮುನಿವರ್ಯರೇ, ಜಗತ್ತಿನಲ್ಲಿ ಪ್ರಜ್ಞಾವಂತನೂ ಆದರ್ಶಗಳನ್ನು ನಂಬಿದವನೂ ಆಗಿರುವ ವ್ಯಕ್ತಿಗಳು ಯಾರಾದರೂ ಇರುವರೇನು?" ಎಂದು ಕೇಳಿದರು.

"ಏಕಿಲ್ಲ ಮಹರ್ಷಿಗಳೇ? ಸೂರ್ಯವಂಶದಲ್ಲಿ ಹುಟ್ಟಿದ ರಾಮನೆಂಬುವನು ಇರುವನಲ್ಲ!" ಎಂದಾಗ ವಾಲ್ಮೀಕಿಗಳು ಆತನ

ವಿವರಗಳನ್ನು ತಿಳಿಸಲು ಕೇಳಿಕೊಂಡರು. ನಾರದರು ರಾಮನ ಇತಿಹಾಸವನ್ನು ವಿಸ್ತಾರವಾಗಿ ವಿವರಿಸಿದರು.

ವಾಲ್ಮೀಕಿಗಳು ನಾರದರಿಂದ ಕೇಳಿದ ಮೇಲೆ ರಾಮನ ವ್ಯಕ್ತಿತ್ವಕ್ಕೆ ಸಂಪೂರ್ಣವಾಗಿ ಮಾರು ಹೋದರು. ಆತನನ್ನು ಕುರಿತು ಮಹಾಕಾವ್ಯವೊಂದನ್ನು ಬರೆಯಲೇ ಬೇಕೆನಿಸಿತು. ಆದರೆ ಹೇಗೆ ಬರೆಯುವುದು? ಯಾವ ಛಂದಸ್ಸಿನಲ್ಲಿ ಬರೆಯುವುದು? ಇವೇ ಅವರಿಗೆ ಸಮಸ್ಯೆಗಳೆನಿಸಿದವು.

ಒಂದು ದಿನ ಪ್ರತಿದಿನದಂತೆ ಸ್ನಾನ, ಸಂಧ್ಯಾವಂದನೆ ಮುಗಿಸಿ, ಕಾಡಿನ ಹಾದಿಯಲ್ಲಿ ಬರುತ್ತಿದ್ದಾಗ, ಕ್ರೌಂಚಪಕ್ಷಿಯೊಂದರ ಆರ್ತಸ್ವರ ಕೇಳಿಸಿತು. ಆಶ್ಚರ್ಯ ಮತ್ತು ನೋವಿನಿಂದ ಬಳಿ ಸಾರಿ ನೋಡಿದರು. ಕ್ರೌಂಚದಂಪತಿಗಳು ಪ್ರೀತಿ ಮಾಡುತ್ತ ಸಂತೋಷದಲ್ಲಿರುವಾಗ, ವ್ಯಾಧನೊಬ್ಬ(ಬೇಡ) ತನ್ನ ಬಾಣದಿಂದ ಒಂದು ಹಕ್ಕಿಯನ್ನು (ಗಂಡುಹಕ್ಕಿ) ಕೊಂದಿದ್ದನು. ತನ್ನ ಜೊತೆಗಾರನ ಅಗಲಿಕೆಯನ್ನು ಸಹಿಸಲಾರದೆ ಹೆಣ್ಣು ಹಕ್ಕಿ ದುಃಖದಿಂದ ವಿಲಪಿಸುತ್ತಿತ್ತು. ವಾಲ್ಮೀಕಿಗಳಿಗೆ ಆ ಸಂಕಟವನ್ನು ನೋಡಲಾಗಲಿಲ್ಲ. ಬಾಣದಿಂದ ಕೊಂದ ಬೇಡನ ಬಗ್ಗೆ ಸಿಟ್ಟು, ಅಸಮಾಧಾನಗಳು, ಅವನಿಗೆ ಶಾಪಕೊಡುವಂತೆ ಮಾಡಿದವು. ಅದರಂತೆಯೇ ಅವನೂ ಕೂಡಾ ನೋವನ್ನು ಅನುಭವಿಸಲಿ ಎಂದು ಶಾಪ ಹಾಕಿದರು.

ಶಾಪವನ್ನೇನೋ ನುಡಿದರು. ಆದರೆ ಅದರಿಂದ ಅವರ ಮನಸ್ಸಿಗೆ ನೋವಾಯಿತು. ಅಪರಾಧ ಮಾಡಿದಂತೆನಿಸಿತು. ಆ ಘಟನೆ ಅವರ ಮನಸ್ಸಿನಲ್ಲಿ ಮತ್ತೆ ಮತ್ತೆ ಮರುಕಳಿಸಿತು. ನುಡಿದ ಶಾಪದ ಮಾತುಗಳು ಶ್ಲೋಕದ ಛಂದಸ್ಸಿಗೆ ಹೊಂದುವಂತಿದೆ ಎನಿಸಿತು. ಕೂಡಲೇ ಅವರು ಸಂಭ್ರಮ ಆಶ್ಚರ್ಯಗಳಿಂದ ಅದೇ ಛಂದಸ್ಸಿನಲ್ಲಿ ರಾಮಕಥೆಯನ್ನು ಬರೆಯಲು ಮುಂದಾದರು.

❖

## ರಾಮನ ಜನನ

ಗಂಗಾನದಿಯ ಉತ್ತರಕ್ಕೆ, ಸರಯೂ ನದೀ ತೀರದಲ್ಲಿ ಅಯೋಧ್ಯಾ ನಗರವಿತ್ತು. ದಶರಥನೆಂಬ ರಾಜನು ಅದನ್ನು ಆಳುತ್ತಿದ್ದ. ಸೂರ್ಯವಂಶದಲ್ಲಿ ಹುಟ್ಟಿದ ಆತ ಪರಾಕ್ರಮಿ, ಸತ್ಯನಿಷ್ಠ, ಪ್ರಜಾಪ್ರೇಮಿ, ನ್ಯಾಯನಿಷ್ಠುರಿ, ಉದಾರಿ ಎಂದೆಲ್ಲ ಹೊಗಳಿಸಿಕೊಂಡಿದ್ದ. ರಾಜ್ಯವನ್ನು ಬಹಳ ಸಾಮರ್ಥ್ಯದಿಂದ ಆಳುತ್ತಿದ್ದ. ಪ್ರಜೆಗಳು ಯಾವುದೇ ಕೊರತೆಯಿಲ್ಲದೆ ಸುಖವಾಗಿದ್ದರು.

ದಶರಥನಿಗೆ ಎಲ್ಲ ರೀತಿಯಿಂದಲೂ ಸಹಕರಿಸಲು, ಮಾರ್ಗದರ್ಶನ ನೀಡಲು ವಸಿಷ್ಠ, ವಾಮದೇವ ಮೊದಲಾದ ಋಷಿಗಳಿದ್ದರು; ಎಂಟು ಜನ ಮಂತ್ರಿಗಳು ಇದ್ದರು. ದಶರಥನ ಕೀರ್ತಿ ದಶದಿಕ್ಕುಗಳಲ್ಲಿಯೂ ಹರಡಿತ್ತು.

ರಾಜನಿಗೆ ಅನುರೂಪರಾದ ಮೂವರೂ ಮಡದಿಯರೂ ಇದ್ದರು. ಕೌಸಲ್ಯ, ಸುಮಿತ್ರಾ ಮತ್ತು ಕೈಕೆ. ಇವರು ಮೂವರೂ ಅನ್ಯೋನ್ಯವಾಗಿ ಬಾಳುತ್ತಿದ್ದರು. ದಶರಥನಿಗೆ ಎಲ್ಲ ಬಗೆಯ ಸುಖ, ಸಂತೋಷಗಳು ಲಭ್ಯವಾಗಿದ್ದರೂ ಮಕ್ಕಳಿಲ್ಲದ ಕೊರತೆ ಕಾಡುತ್ತಿತ್ತು. ತನ್ನ ನಂತರ ರಾಜ್ಯವನ್ನಾಳಲು, ತನ್ನ ವಂಶವನ್ನು ಮುಂದುವರೆಸಲು ಪುತ್ರರಿಲ್ಲವೆಂಬ ಚಿಂತೆ ರಾಜನನ್ನು ಕಾಡುತ್ತಿತ್ತು. ಮಕ್ಕಳನ್ನು ಪಡೆಯಲು ಏನಾದರೂ ಮಾಡಬೇಕೆಂಬ ಆಲೋಚನೆಯಿಂದ ಕುಲಗುರುಗಳಾದ ವಸಿಷ್ಠರೊಂದಿಗೆ ಚರ್ಚಿಸಿದರು. ಮಹರ್ಷಿಗಳು ಅದಕ್ಕಾಗಿ ಪುತ್ರ ಕಾಮೇಷ್ಠಿ ಯಾಗವನ್ನು ಮಾಡಲು ಸಲಹೆ ನೀಡಿದರು.

ದಶರಥ ಅದಕ್ಕೆ ಸಮ್ಮತಿಸಿ, ಋಷ್ಯಶೃಂಗರನ್ನು ಕರೆಸಿ ಅವರ ಮುಂದಾಳತ್ವದಲ್ಲಿ, ಪೌರೋಹಿತ್ಯದಲ್ಲಿ ಯಾಗವನ್ನು ಪೂರೈಸಿದನು.

ನಿರೀಕ್ಷಿಸಿದಂತೆ ಯಜ್ಞದೇವತೆಗಳು ಸಂತೃಪ್ತರಾದರು. ಅವರೆಲ್ಲರೂ ವಿಷ್ಣುವಿನ ಬಳಿಗೆ ಹೋಗಿ, ಆತನನ್ನು ದಶರಥನ ಮಗನಾಗಿ ಜನಿಸುವಂತೆ ಕೇಳಿಕೊಂಡರು. ವಿಷ್ಣುವೂ ಸಹ ಸಂತೋಷದಿಂದ ಮಗನಾಗಿ ಜನಿಸಲು ಒಪ್ಪಿಕೊಂಡ.

ಯಾಗದ ಬೆಂಕಿಗೆ ತುಪ್ಪವನ್ನು ಎರೆಯುತ್ತಿರುವ ಸಂದರ್ಭದಲ್ಲಿ, ಅಗ್ನಿದೇವ ಪ್ರತ್ಯಕ್ಷನಾಗಿ, ತನ್ನ ಕೈಯಲ್ಲಿದ್ದ ಪಾಯಸದ ಬಟ್ಟಲನ್ನು ದಶರಥನಿಗೆ ಕೊಡುತ್ತಾ ಹೇಳಿದ, "ರಾಜನೇ ದೇವತೆಗಳು ನಿನ್ನ ಯಾಗದಿಂದ ಸಂತೃಪ್ತರಾಗಿದ್ದಾರೆ. ಈ ಪಾಯಸವನ್ನು ನಿನಗೆ ಕಳಿಸಿದ್ದಾರೆ. ಇದನ್ನು ತೆಗೆದುಕೋ. ನಿನ್ನ ಮಡದಿಯರಿಗೆ ಇದನ್ನು ನೀಡು. ಖಂಡಿತವಾಗಿಯೂ ಅವರಿಂದ ನಿನಗೆ ಮಕ್ಕಳು ಲಭಿಸುತ್ತಾರೆ" ಎಂದು ಹೇಳಿ ಅದೃಶ್ಯನಾದ.

ದಶರಥನು ಸಂತೋಷದಿಂದ ಹಿಗ್ಗುತ್ತ, ಆ ಪಾಯಸವನ್ನು ತನ್ನ ಮೂವರು ಮಡಿದಿಯರಿಗೆ ಹಂಚಿದ. ಕೌಸಲ್ಯೆಗೆ ಅರ್ಧವನ್ನು ಕೊಟ್ಟು, ಉಳಿದರ್ಧವನ್ನು ಕೈಕೆಗೆ ಕೊಟ್ಟನು. ಕೌಸಲ್ಯ ಮತ್ತು ಕೈಕೆ ತಮ್ಮದರ ಅರ್ಧವನ್ನು ಸುಮಿತ್ರೆಗೆ ನೀಡಿದರು.

ಮೂವರು ರಾಣಿಯರೂ ಬಡವನಿಗೆ ಭಾಗ್ಯ ಬಂದಂತೆ, ಸಂತೋಷದಿಂದ ಇದ್ದರು. ಕೆಲದಿನಗಳ ನಂತರ ರಾಣಿಯರು ಗರ್ಭವತಿಯರಾದರೆಂಬ ಸುದ್ದಿಯಿಂದ ದಶರಥ ಮತ್ತು ಅರಮನೆಯಲ್ಲಿ ಎಲ್ಲರೂ ಸಂತೋಷಪಟ್ಟು, ಮಕ್ಕಳ ಬರುವಿಗಾಗಿ ಕಾತರತೆಯಿಂದ ಕಾಯತೊಡಗಿದರು.

ನಿರೀಕ್ಷಿಸಿದ ಕ್ಷಣಗಳು ಬಂದೇ ಬಂದವು. ಮೂವರು ರಾಣಿಯರೂ ಗಂಡು ಮಕ್ಕಳಿಗೆ ಜನ್ಮ ನೀಡಿದರು. ಅವರಿಗೆ ನಾಮಕರಣಾದಿಗಳನ್ನು ಮಾಡಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂದು ಹೆಸರಿಟ್ಟರು.

ಪ್ರಜೆಗಳ ಸಂತೋಷಕ್ಕೆ ಪಾರವೆ ಇಲ್ಲದಂತಾಯಿತು. ಈ ನಾಲ್ಕೂ ಸಹೋದರರು, ತಮ್ಮ ತಮ್ಮಲ್ಲಿಯಾವುದೇ ಕಿತ್ತಾಟವಿಲ್ಲದೆ ಪರಸ್ಪರ ಪ್ರೀತಿ, ಅನ್ಯೋನ್ಯತೆಗಳೊಂದಿಗೆ ಬೆಳೆದರು. ನೋಡಲು ಸುಂದರವಾಗಿದ್ದರು; ಬುದ್ಧಿವಂತರಾಗಿದ್ದರು; ವಿನಯವಂತರಾಗಿದ್ದರು.

ಅಣ್ಣ ತಮ್ಮಂದಿರು ಒಂದು ಕ್ಷಣವಾದರೂ, ಒಬ್ಬರನ್ನೊಬ್ಬರು ಬಿಟ್ಟು ಇರುತ್ತಿರಲಿಲ್ಲ. ಆದರೂ ರಾಮ, ಲಕ್ಷ್ಮಣರು ಒಟ್ಟಿಗೆ ಇರುತ್ತಿದ್ದುದೇ ಹೆಚ್ಚು ಹಾಗೆಯೇ ಭರತ, ಶತ್ರುಘ್ನರು ಒಟ್ಟಿಗೆ ಇರುತ್ತಿದ್ದರು.



# ಗುರುಕುಲಕ್ಕೆ

ದಶರಥ ಒಂದು ಒಳ್ಳೆಯ ದಿನ ನೋಡಿ ಬಾಲಕರಿಗೆ ಬ್ರಹ್ಮೋಪದೇಶ ಮಾಡಿಸಿ, ಗುರುಕುಲಕ್ಕೆ ವಿದ್ಯಾಭ್ಯಾಸಕ್ಕಾಗಿ ಕಳಿಸಿಕೊಟ್ಟ. ವಸಿಷ್ಠರೇ ಅವರ ವಿದ್ಯಾಗುರುಗಳಾದರು. ತಮ್ಮ ಆಶ್ರಮದಲ್ಲಿ ಅವರನ್ನು ಬರಮಾಡಿಕೊಂಡು ವಿದ್ಯಾಭ್ಯಾಸವನ್ನು ಆರಂಭಿಸಿದರು. ನಿರ್ವಂಚನೆಯಿಂದ ರಾಜಕುಮಾರರಿಗೆ ಬೇಕಾದ ಎಲ್ಲ ವಿದ್ಯೆಗಳನ್ನೂ ಕಲಿಸತೊಡಗಿದರು.

ಗುರುಕುಲಕ್ಕೆ ಬರುವುದಕ್ಕೆ ಮೊದಲೇ ದಶರಥ ತನ್ನ ಮಕ್ಕಳಿಗೆ ಬಿಲ್ವಿದ್ಯೆಯನ್ನು ತಾನೇ ಸ್ವತಃ ಕಲಿಸಲು ಆರಂಭಿಸಿ ಮೊದಲ ಗುರು ಎನಿಸಿಕೊಂಡಿದ್ದ. ಬಿಲ್ವಿದ್ಯೆಯಲ್ಲಿ ಆತ ಪಾರಂಗತನಾಗಿದ್ದ. ಅದರಲ್ಲಿಯೂ 'ಶಬ್ದವೇದಿ' ವಿದ್ಯೆಯಲ್ಲಿ ಆತನನ್ನು ಮೀರಿಸುವವರೇ ಇಲ್ಲವಾಗಿದ್ದರು. ಕೇವಲ ಶಬ್ದದ ಮೂಲಕವೆ ಗುರಿಯಿಟ್ಟು ಬಾಣವನ್ನು ತಲುಪಿಸಬಲ್ಲವನಾಗಿದ್ದ.

ಮಕ್ಕಳು ತಂದೆ ಕಲಿಸಿದ ವಿದ್ಯೆಯ ಜೊತೆಗೆ ಗುರುಗಳಿಂದಲೂ ಬಿಲ್ವಿದ್ಯೆ, ವೇದಶಾಸ್ತ್ರ ಪುರಾಣ, ವ್ಯಾಕರಣ, ನಿಘಂಟು, ನ್ಯಾಯಶಾಸ್ತ್ರ, ರಾಜ್ಯಶಾಸ್ತ್ರ ಮೊದಲಾದ ಅನೇಕ ವಿಷಯ, ವಿದ್ಯೆಗಳನ್ನು ಕಲಿತರು. ಜೊತೆಗೆ ನೈತಿಕ ಮೌಲ್ಯಗಳ ಬಗ್ಗೆ ವಿಶೇಷವಾದ ಅರಿವನ್ನು ಪಡೆದರು. ಈ ರಾಜಕುಮಾರರ ವಿನಯ, ವಿಧೇಯತೆ, ಕಲಿಕೆಯ ಸಾಮರ್ಥ್ಯ, ಪ್ರತಿಭೆ, ಜಾಣ್ಮೆಗಳನ್ನು ಕಂಡು ಗುರುಗಳಾದ ವಸಿಷ್ಠರಿಗೆ ಅತಿಯಾದ ಸಂತೋಷವಾಯಿತು. ಪ್ರೀತಿ, ಮೆಚ್ಚುಗೆಗಳಿಂದ ವಸಿಷ್ಠರು ರಾಜಕುಮಾರರಿಗೆ ಕಲಿಸಬೇಕಾದ್ದೆಲ್ಲವನ್ನೂ ಕಲಿಸಿ, ಅವರ ವಿದ್ಯಾಭ್ಯಾಸವನ್ನು ಪೂರೈಸಿದರು.

ವಿದ್ಯಾಭ್ಯಾಸ ಮುಗಿದು ಸೋದರರು ಮನೆಗೆ ಮರಳುವ ಸಮಯ ಬಂತು. ಗುರುಗಳು ಅರಮನೆಗೆ ಸಂದೇಶ ಕಳಿಸಿದರು.

ದಶರಥನಿಗೆ ಮಕ್ಕಳು ವಿದ್ಯಾಭ್ಯಾಸ ಮುಗಿಸಿ ಗುರುಕುಲದಿಂದ ಮನೆಗೆ ಮರಳುವ ಸುದ್ದಿ ಸಂತೋಷವನ್ನುಂಟು ಮಾಡಿತು. ತನ್ನ ಮಂತ್ರಿಯಾದ ಸುಮಂತ್ರನನ್ನು ಕರೆದು ಮಕ್ಕಳನ್ನು ಕರೆತರಲು ಹೇಳಿದ. ಸುಮಂತ್ರ, ಅರಸನ ಮಾತಿನಂತೆ, ವಸಿಷ್ಠರ ಆಶ್ರಮದತ್ತ ರಥವೇರಿ ಹೊರಟ.

ಸುಮಂತ್ರ ವಸಿಷ್ಠರ ಆಶ್ರಮವನ್ನು ತಲುಪಿ, ವಸಿಷ್ಠರನ್ನು ಕಂಡು ಗೌರವ ಸಲ್ಲಿಸಿದ. ವಸಿಷ್ಠರೊಡನೆ ದಶರಥನ, ಆತನ ಕುಟುಂಬದ, ಅರಮನೆಯಲ್ಲಿನ ಬಂಧು ಬಾಂಧವರ ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸಿದರು.

ರಾಮ, ಲಕ್ಷ್ಮಣ, ಭರತ, ಶತ್ರುಘ್ನರನ್ನು ಕರೆದು ಅರಮನೆಗೆ ಹೊರಡಬೇಕೆಂಬ ವಿಚಾರವನ್ನು ತಿಳಿಸಲು, ಅವರು ಬಾಡಿ ಹೋದರು. ಅಷ್ಟು ವರ್ಷಕಾಲ ಗುರುಕುಲದಲ್ಲಿ ಗೆಳೆಯರೊಂದಿಗೆ, ಗುರುಗಳೊಂದಿಗೆ ಎಷ್ಟೊಂದು ಬೆರೆತು ಹೋಗಿದ್ದರೆಂದರೆ, ಅವರನ್ನು ಬಿಟ್ಟು ಹೋಗಬೇಕೆಂಬ ಆಲೋಚನೆಯೇ ಅವರಿಗೆ ಸಹಿಸಲಾಗಲಿಲ್ಲ. ಆದರೂ ವಿದ್ಯಾಭ್ಯಾಸದ ನಂತರ ಹೊರಡುವುದು ಅನಿವಾರ್ಯವಾಗಿತ್ತು. ಆದ್ದರಿಂದ ಒಲ್ಲದ ಮನಸ್ಸಿನಿಂದಲೇ, ಗುರುಕುಲದ ಗೆಳೆಯರಿಂದ ಬೀಳ್ಕೊಂಡು ಸುಮಂತ್ರನು ತಂದಿದ್ದ ರಥವನ್ನೇರಿ ಅಯೋಧ್ಯೆಯ ಕಡೆ ಸಾಗಿದರು.



## ಅಯೋಧ್ಯೆಗೆ ರಾಜಕುಮಾರರ ಮತ್ತು ವಿಶ್ವಾಮಿತ್ರರ ಆಗಮನ

ರಾಜಕುಮಾರರು ಅಯೋಧ್ಯೆಗೆ ಮರಳಿ ಬರುತ್ತಾರೆಂಬ ಸುದ್ದಿ ಕೇಳಿ ರಾಣಿಯರ ಸಂತೋಷಕ್ಕೆ ಎಣೆ ಇಲ್ಲದಂತಾಯಿತು. ಅವರ ಸ್ವಾಗತಕ್ಕಾಗಿ ವಿಶೇಷ ಸಿದ್ಧತೆಗಳು ನಡೆದವು. ನಾಗರಿಕರೂ ತಮ್ಮರಸನ ಮಕ್ಕಳ ಸ್ವಾಗತಕ್ಕಾಗಿ, ಅಯೋಧ್ಯಾ ನಗರವನ್ನು ಸಂಭ್ರಮದಿಂದ ಸಿಂಗರಗೊಳಿಸಿದರು. ಎಲ್ಲೆಲ್ಲೂ ತಳಿರು ತೋರಣ, ರಂಗವಲ್ಲಿಗಳು, ಬಾಜಾಭಜಂತ್ರಿಗಳು ಕಂಗೊಳಿಸಿದವು.

ರಾಜಕುಮಾರರಿಗೆ, ಪ್ರಜೆಗಳ ಈ ಸಂಭ್ರಮ ಸಂತೋಷಗಳನ್ನು ಕಂಡು ಹೆಮ್ಮೆಯೆನಿಸಿತು. ಅವರ ಪ್ರೀತಿಗಾಗಿ ಹೃದಯ ತುಂಬಿ ಬಂತು. ರಥದಿಂದ ಇಳಿದು ಕಾಲು ನಡಿಗೆಯಲ್ಲಿಯೇ ಬೀದಿ ಬೀದಿಗಳಲ್ಲಿನ ಅಲಂಕಾರವನ್ನು ಸವಿಯುತ್ತ ಅರಮನೆಯನ್ನು ಪ್ರವೇಶಿಸಿದರು.

ಅರಮನೆಯ ಬಾಗಿಲಲ್ಲೇ ದಶರಥ ಮತ್ತು ರಾಣಿಯರು ತಮ್ಮ ಮಕ್ಕಳನ್ನು ಬರಮಾಡಿಕೊಳ್ಳಲು ನಿಂತಿದ್ದರು. ಎಷ್ಟೋ ದಿನಗಳ ನಂತರ ಮತ್ತೆ ಮಕ್ಕಳನ್ನು ನೋಡಿದ ಕೂಡಲೇ ಪ್ರೀತಿಯಿಂದ ಅವರನ್ನು ಬರಸೆಳೆದು ಬಿಗಿದಪ್ಪಿಕೊಂಡರು. ಅಲ್ಲಿ ನೆರೆದಿದ್ದವರೆಲ್ಲರೂ ರಾಜಕುಮಾರರನ್ನು ಕೊಂಡಾಡಿದರು. ಮನಸ್ಸಿನಿಂದ ಆಶೀರ್ವಾದ ಮಾಡಿದರು.

ದಶರಥನಿಗೆ ತನ್ನ ಮಕ್ಕಳ ರೂಪ, ಗುಣ, ಸಾಹಸ, ವಿದ್ಯೆಗಳ ಬಗ್ಗೆ ಹೆಮ್ಮೆ ಎನಿಸಿತು. ತನ್ನ ರಾಜ್ಯದ ಕ್ಷೇಮದ ಬಗ್ಗೆ ನಿಶ್ಚಿಂತನಾದ. ರಾಮನಂತರ ಮಗನ ಕೈಯಲ್ಲಿ ರಾಜ್ಯ ಸುರಕ್ಷಿತವೂ ಸುಭಿಕ್ಷವೂ ಆಗಿರುತ್ತದೆಂಬ ಭರವಸೆ ಮೂಡಿತು. ಅವನ ಆಶ್ರಯದಲ್ಲಿ, ಆಡಳಿತದಲ್ಲಿ ಪ್ರಜೆಗಳು ಸುಖವಾಗಿರ ಬಲ್ಲರೆನಿಸಿತು.

ಕೆಲದಿನಗಳ ನಂತರ, ಒಂದು ದಿನ ದಶರಥ ತನ್ನ ಮಕ್ಕಳ ಮದುವೆಯ ವಿಚಾರವಾಗಿ ಆಲೋಚಿಸುತ್ತಿರುವಾಗ, ಸೇವಕನೊಬ್ಬ ರಾಜನ ಬಳಿಗೆ

ಬಂದು ವಿಶ್ವಾಮಿತ್ರ ಋಷಿಗಳು ಬಂದಿರುವರೆಂಬ ಸುದ್ದಿಕೇಳಿ, ಗೌರವದಿಂದ ಬರಮಾಡಿಕೊಂಡ. ಸಿಂಹಾಸನದಿಂದ ಇಳಿದು ಬಂದು ಭಕ್ತಿಪೂರ್ವಕವಾಗಿ ನಮಸ್ಕರಿಸಿ, "ಋಷಿವರ್ಯರೇ, ನಿಮ್ಮ ಬರವಿನಿಂದ ನಮಗೆ ಸಂತೋಷವಾಗಿದೆ. ಹೇಳಿ, ನಮ್ಮಿಂದ ಏನಾದರೂ ಆಗಬೇಕಿದ್ದರೆ ಅಪ್ಪಣೆಕೊಡಿ" ಎಂದು ವಿನಯದಿಂದ ನುಡಿದ.

ಋಷಿಗಳಲ್ಲೆಲ್ಲ ಅತ್ಯಂತ ಹೆಸರಾದ ತಪಸ್ವಿ. ಒಂದು ಕಾಲಕ್ಕೆ ರಾಜನಾಗಿದ್ದು, ತನ್ನ ಕಠಿಣ ತಪಸ್ಸಿನ ಮೂಲಕ ಋಷಿಯಾಗಿದ್ದ. ಕಾರಣಾಂತರಗಳಿಂದ ವಸಿಷ್ಠ-ವಿಶ್ವಾಮಿತ್ರರ ನಡುವೆ ಪೂರ್ವದಲ್ಲಿ ವಿರಸವಿತ್ತು. ನಂತರ ವಸಿಷ್ಠರ ತಪಶ್ಶಕ್ತಿ, ಸಾಮರ್ಥ್ಯಗಳನ್ನು ಅರ್ಥಮಾಡಿಕೊಂಡು, ಅವರಂತೆ, ಬ್ರಹ್ಮರ್ಷಿಯಾಗಲು ಪ್ರಯತ್ನಿಸಿದ. ತನ್ನ ತಪಸ್ಸಿನ ಪ್ರಭಾವದಿಂದ, ತ್ರಿಶಂಕುವಿಗೆ ಸ್ವರ್ಗ ಪ್ರವೇಶ ನಿರಾಕರಿಸಿದಾಗ, ತಾನೇ ಅವನಿಗಾಗಿ ಒಂದು ಸ್ವರ್ಗವನ್ನು ಸೃಷ್ಟಿಸಿದ. ತಲೆಕೆಳಗಾಗಿ ಬೀಳುತ್ತಿದ್ದ ತ್ರಿಶಂಕುವನ್ನು ರಕ್ಷಿಸಿದ. ಇಷ್ಟೆಲ್ಲ ಮಹಿಮೆಯುಳ್ಳ ವಿಶ್ವಾಮಿತ್ರರು ಬಂದದ್ದು ದಶರಥನಿಗೆ ಸಂತೋಷವೂ ಆಯಿತು. ಹಾಗೆಯೇ ಭಯವೂ ಆಯಿತು. ಏನನ್ನು ಕೇಳುತ್ತಾರೋ ಎಂಬ ಅನುಮಾನ, ಭಯಗಳು ರಾಜನಲ್ಲಿ ನೆಲೆಸಿದ್ದವು. ದಶರಥನ ವಿನಯ, ಕೇಳುವುದನ್ನು ಕೊಡುವನೆಂಬ ಭರವಸೆಯಿಂದ, "ರಾಜನ್, ನಿನ್ನಿಂದ ವಸ್ತುರೂಪದಲ್ಲಿ ಏನನ್ನೂ ಬಯಸುವುದಿಲ್ಲ. ನಾನು ಮತ್ತು ಇತರ ಋಷಿಗಳು ಯಾಗ ಯಜ್ಞಗಳಲ್ಲಿ ತೊಡಗಿದ್ದೇವೆ. ಆದರೆ ಆ ವನಪ್ರಾಂತದಲ್ಲಿ ಅಡ್ಡಾಡುವ ಸುಬಾಹು, ಮಾರೀಚ ಎಂಬ ಇಬ್ಬರು ರಾಕ್ಷಸರು ರಕ್ತ, ಮಾಂಸ, ಎಲಬುಗಳನ್ನು ಸುರಿದು ಯಜ್ಞಭಂಗ ಮಾಡುತ್ತಿದ್ದಾರೆ. ಅವರ ಹಿಂಸೆ, ತೊಂದರೆಗಳನ್ನು ತಡೆಯಲು ನಮ್ಮಿಂದ ಸಾಧ್ಯವಿಲ್ಲ. ಆದ್ದರಿಂದ ನಿನ್ನ ಮಕ್ಕಳಾದ ರಾಮ, ಲಕ್ಷ್ಮಣರನ್ನು ಯಜ್ಞದ ಕಾವಲಿಗೆ ಕಳಿಸಿಕೊಡಬೇಕೆಂದು ಯಾಚಿಸುತ್ತೇನೆ" ಎಂದು ನುಡಿದ.

ದಶರಥನಿಗೆ ಧರ್ಮಸಂಕಟ. ಒಪ್ಪಲೂ ಆಗದೆ ಒಪ್ಪದಿರಲೂ ಆಗದೆ ಚಡಪಡಿಸಿದ. ಮಕ್ಕಳು ಇನ್ನೂ ಎಳೆಯರು, ರಾಕ್ಷಸರನ್ನು ಎದುರಿಸಿ ಬದುಕಿ ಉಳಿಯಬಲ್ಲರೇ ಎಂಬ ಅನುಮಾನ, ಭಯದಿಂದ, ಕಳಿಸಲು

ಹಿಂಜರಿಯುತ್ತಿದ್ದ. ಆದರೆ ವಿಶ್ವಾಮಿತ್ರರ ಕೋಪ ನೆನೆಸಿಕೊಂಡಾಗ ಹೆದರಿಕೆಯಾಯಿತು. ಆದರೂ ಧೈರ್ಯ ತಂದುಕೊಂಡು ಹೇಳಿ.

"ಋಷಿವರ್ಯರೇ, ರಾಮ ಇನ್ನೂ ಚಿಕ್ಕವನು. ಯಾಗವನ್ನು ರಕ್ಷಿಸಲು ಅವನಿಂದ ಸಾಧ್ಯವಾಗುವುದೇ? ಬೇಕಾದರೆ ನನ್ನ ಸೈನ್ಯವನ್ನು ಕಳಿಸಿ, ನಿಮಗೆ ರಕ್ಷಣೆ ನೀಡುತ್ತೇನೆ, ಇಲ್ಲವೇ ನಾನು ಸೈನ್ಯದೊಂದಿಗೆ ಬರುತ್ತೇನೆ."

ಮುಂದುವರೆದು ಮತ್ತೆ ನುಡಿದ, "ರಾಮ ನನ್ನ ಪ್ರಾಣ. ಈ ಪ್ರಯತ್ನದಲ್ಲಿ ಅವನಿಗೇನಾದರೂ ಆದರೆ ನನಗೆ ಸಾವು ತಪ್ಪಿದ್ದಲ್ಲ."

"ಸರಿ ಹಾಗಾದರೆ ನಿನ್ನಿಷ್ಟ. ಇದೇ ನಿನ್ನ ಕಡೆಯ ಮಾತಾದರೆ, ಈಗಲೇ ಹೊರಟು ಹೋಗುತ್ತೇನೆ" ಎಂದು ವಿಶ್ವಾಮಿತ್ರ.

ವಸಿಷ್ಠರು ಮಧ್ಯೆ ಪ್ರವೇಶಿಸಿ, "ರಾಜ, ನೀನು ಹೆದರಬೇಕಾದ್ದಿಲ್ಲ. ಒಂದು ಸಲ ಮಾತು ಕೊಟ್ಟು, ತಪ್ಪಿದರೆ ನಿನ್ನ ವಂಶಕ್ಕೆ ಅಪಕೀರ್ತಿ ಬರುತ್ತದೆ. ರಾಮ, ಲಕ್ಷ್ಮಣ ಇಬ್ಬರನ್ನೂ ಕಳಿಸು. ವಿಶ್ವಾಮಿತ್ರರ ರಕ್ಷಣೆಯಲ್ಲಿ ಅವರಿಗೆ ಎಲ್ಲವೂ ಒಳ್ಳೆಯದಾಗುತ್ತದೆ" ಎಂದು ಸಮಾಧಾನದಿಂದ ತಿಳಿಸಿ ಹೇಳಿದರು.

ದಶರಥ ಮನಸ್ಸು ಬದಲಾಯಿಸಿ, ತನ್ನ ಮಕ್ಕಳಿಬ್ಬರನ್ನೂ ವಿಶ್ವಾಮಿತ್ರರ ಜೊತೆ ಕಳಿಸಿಕೊಟ್ಟ. ವಿಶ್ವಾಮಿತ್ರ, ರಾಮ, ಲಕ್ಷ್ಮಣರನ್ನು ಕರೆದುಕೊಂಡು ಪ್ರಯಾಣದ ಹಾದಿಯಲ್ಲಿ ಅಲ್ಲಲ್ಲಿ ತಂಗುತ್ತ, ಗಂಗಾನದಿಯಲ್ಲಿ ಪುಣ್ಯ ಸ್ನಾನ ಮಾಡಿಸಿ, ಸಾಕಷ್ಟು ದೂರ ನಡೆದು ದಂಡಕಾರಣ್ಯವನ್ನು ತಲುಪಿದರು.

ಅಲ್ಲಿಗೆ ಬಂದ ಮೇಲೆ, ವಿಶ್ವಾಮಿತ್ರ ಋಷಿ, ತಾಟಕ ಎಂಬ ರಾಕ್ಷಸಿಯ ಬಗ್ಗೆ, ಅವರ ಮಗ ಮಾರೀಚನ ಬಗ್ಗೆ ವಿವರಿಸಿ ತಿಳಿಸಿದ. ಅವರಿಂದ ಈ ಪ್ರದೇಶದಲ್ಲಿರುವವರೆಲ್ಲ ಅನುಭವಿಸುತ್ತಿರುವ ಸಂಕಷ್ಟಗಳನ್ನು ತಿಳಿಸಿದ.

ಆ ರಾಕ್ಷಸರ ಭಯಂಕರ ವರ್ಣನೆಯನ್ನು ಕೇಳಿದ ರಾಮ ಒಂದಿಷ್ಟೂ ಹೆದರದೆ, ಒಮ್ಮೆ ಬಿಲ್ಲಿನ ಠೇಂಕಾರವನ್ನು ಮಾಡಿದ. ಅದರ ಪ್ರತಿಧ್ವನಿ ಕಾಡಿನಲ್ಲೆಲ್ಲ ಅನುರಣಿಸಿತು, ಅಷ್ಟರಿಂದಲೇ 'ತಾಟಕ' ರಾಕ್ಷಸಿಗೆ, ಈ ಪ್ರದೇಶಕ್ಕೆ ಯಾರೋ ಬಂದಿರಬೇಕೆನಿಸಿತು. ಅನ್ಯರ ಪ್ರವೇಶದಿಂದ ಕೋಪೋದ್ರಿಕ್ತಳಾಗಿ, ಠೇಂಕಾರದ ಸದ್ದು ಹೊರಟ ದಿಕ್ಕಿನೆಡೆಗೆ ಬಂದು ರಾಮನ ಮೇಲೆ ಆಕ್ರಮಣ ಮಾಡಿದಳು. ರಾಮ ಅವಳ ಆಕ್ರಮಣವನ್ನು ಎದುರಿಸುತ್ತಾ ಅವಳ ಕೈಕಾಲುಗಳನ್ನು ಕತ್ತರಿಸಿ, ಪ್ರಾಣಭಿಕ್ಷೆ ನೀಡಿದ.



ಆದರೆ ವಿಶ್ವಾಮಿತ್ರ, ಮುಂದೆಯೂ ಅವಳಿಂದ ಅಪಾಯ ತಪ್ಪಿದ್ದಲ್ಲವೆನಿಸಿ, ಕೊಲ್ಲಲು ಆದೇಶಿಸಿದ. ಕೂಡಲೇ ರಾಮ ತನ್ನ ಬಾಣದಿಂದ ಅವಳನ್ನು ಕೊಂದು ಯಮಪುರಿಗೆ ಕಳಿಸಿದ.

ಮುಂದೆ ಸ್ವಲ್ಪ ದೂರ ನಡೆದ ಮೇಲೆ ಮಾರೀಚ, ಸುಬಾಹುಗಳು ವಾಸಿಸುತ್ತಿದ್ದ ಪ್ರದೇಶವನ್ನು ತಲುಪಿದರು. ನಂತರ ಅವರಿಬ್ಬರನ್ನೂ ಎದುರಿಸಿ, ಸುಬಾಹುವನ್ನು ಕೊಂದು ಮಾರೀಚನನ್ನು ಗಾಯಗೊಳಿಸಿ ಅವನನ್ನು ಪ್ರಾಣದಿಂದ ಉಳಿಸಿ ಬಿಟ್ಟು ಬಿಟ್ಟರಾದರೂ, ಉಳಿದ ರಾಕ್ಷಸರನ್ನೆಲ್ಲ ಧ್ವಂಸ ಮಾಡಿದರು.

ಆ ಪ್ರದೇಶದಲ್ಲಿ ವಾಸಿಸುತ್ತಿದ್ದ ಋಷಿ ಮುನಿಗಳೆಲ್ಲರೂ ರಾಮ, ಲಕ್ಷ್ಮಣರ ಸಾಹಸ, ಸಹಾಯವನ್ನು ಕೊಂಡಾಡಿ ಆಶೀರ್ವದಿಸಿದರು. ಹಾಗೆಯೇ ತಾವೆಲ್ಲರೂ ಜನಕ ಮಹಾರಾಜ ಮಾಡುತ್ತಿರುವ ಯಾಗದಲ್ಲಿ ಭಾಗವಹಿಸಲು ವಿದೇಹ ದೇಶಕ್ಕೆ ಹೋಗುತ್ತಿರುವುದಾಗಿಯೂ, ರಾಮ ಲಕ್ಷ್ಮಣರೂ ತಮ್ಮೊಂದಿಗೆ ಬರುವುದಾದರೆ, ಜನಕನಲ್ಲಿ ಇರುವ ಅದ್ಭುತವಾದ ಶಿವಧನಸ್ಸನ್ನು ನೋಡಲು ಅವಕಾಶ ಸಿಗುವುದೆಂದು ತಿಳಿಸಿ ಹೇಳಿದರು.



# ಸೀತಾ ಸ್ವಯಂವರ

ಮಿಥಿಲೆಯ ಅರಸ ಜನಕ ರಾಜರ್ಷಿಯಾಗಿದ್ದ. ಆದರ್ಶ ರಾಜ. ಪ್ರಜ್ಞಾವಂತ, ಪ್ರಜಾಪ್ರೇಮಿಯಾಗಿದ್ದ. ಆತ ದಶರಥನ ಪ್ರಿಯ ಮಿತ್ರನಾಗಿದ್ದ. ರಾಜ ಮಾತ್ರವಾಗಿರದೆ ಬ್ರಹ್ಮಜ್ಞಾನಿಯೂ ಆಗಿದ್ದ. ಎಲ್ಲ ಭಾಗ್ಯಗಳಿದ್ದು, ಮಕ್ಕಳಿಲ್ಲದ ಕಾರಣ ಯಜ್ಞವೊಂದನ್ನು ಮಾಡಲು ಜಾಗವನ್ನು ಹುಡುಕುತ್ತಾ ಒಂದೆಡೆ ಸೂಕ್ತ ಜಾಗ ಕಾಣಲು ನೇಗಿಲಿನಿಂದ ಅದನ್ನು ಉಳಲು ಪ್ರಯತ್ನಿಸಿದಾಗ, ಅಲ್ಲಲ್ಲಿ ದಟ್ಟವಾಗಿ ಬೆಳೆದ ಪೊದೆಗಳ ನಡುವಿನಿಂದ ಮಗುವೊಂದರ ಅಳುವು ಕೇಳಿಸಿತು. ಹುಡುಕಿ ನೋಡಲಾಗಿ ಅನುಪಮ ಚೆಲುವಿನಿಂದ ಕೂಡಿ ಮುದ್ದಾದ ಮಗುವೊಂದು ಕಾಣಿಸಿತು. ಜನಕನಿಗೆ ಸಂತೋಷವಾಯಿತು. ಭೂದೇವಿಯ ವರವೆಂದು ಅದನ್ನು ತೆಗೆದುಕೊಂಡು ಹೋಗಿ ಅಪಾರ ಪ್ರೀತಿಯಿಂದ ಬೆಳೆಸಿದ. ಆ ಮಗುವಿಗೆ "ಸೀತೆ" ಎಂದು ಹೆಸರಿಟ್ಟ.

ಆ ಸೀತೆಯೆ ಈಗ ಪ್ರಾಪ್ತವಯಸ್ಕಳಾಗಿ ಮದುವೆಗೆ ಸಿದ್ಧವಾಗಿ ನಿಂತಿದ್ದಳು. ಮದುವೆಯಾದರೆ ತನ್ನಿಂದ ಅವಳು ದೂರವಾಗುವಳಲ್ಲ ಎಂಬ ನೋವು ಕಾಡುತ್ತಿತ್ತು. ಆದರೂ ಮದುವೆ ಮಾಡುವುದು ಅನಿವಾರ್ಯವಾಗಿ, ವರಾನ್ವೇಷಣೆ ಮಾಡತೊಡಗಿದ. ಅನೇಕ ರಾಜಕುಮಾರರು ಸೀತೆಯಂತಹ ಅನುಪಮ ಸುಂದರಿಯನ್ನು ಮದುವೆಯಾಗಲು ಮುಂದಾಗುತ್ತಿದ್ದರು. ಆದರೆ ಜನಕನಿಗೆ, ಸೀತೆಗೆ ಅನುರೂಪನಾದ ವರ ಸಿಗಲಿಲ್ಲವಾಗಿ ಸಮರ್ಥನಾದ ವರನನ್ನು ಹೇಗಾದರೂ ಪತ್ತೆ ಹಚ್ಚಬೇಕೆನಿಸಿತು. ಒಂದು ಆಲೋಚನೆ ಮಾಡಿದ.

ಹಿಂದೊಮ್ಮೆ ಅವನು ಮಾಡಿದ ಯಾಗದಿಂದ ಸಂತೃಪ್ತನಾದ ವರುಣ ಜನಕನಿಗೆ ಶಿವಧನಸ್ಸನ್ನು ಉಡುಗೊರೆಯಾಗಿ ಕೊಟ್ಟಿದ್ದ. ಆ ದಿವ್ಯ ಧನಸ್ಸನ್ನು

ಎತ್ತಿ ಹೆದೆಯೇರಿಸುವುದೆಂದರೆ ಸಾಮಾನ್ಯ ವಿಷಯವಾಗಿರಲಿಲ್ಲ. ಆದ್ದರಿಂದ ಅವನು ಸೀತೆಯ ಸ್ವಯಂವರವನ್ನು ಏರ್ಪಡಿಸಿ, ಒಂದು ಷರತ್ತನ್ನು ಘೋಷಿಸಿದ. ಯಾರು ಈ ಶಿವಧನಸ್ಸನ್ನು ಎತ್ತಿ ಹೆದೆಯೇರಿಸಬಲ್ಲರೋ ಅವರಿಗೆ ಸೀತೆಯನ್ನು ಕೊಡುವುದೆಂದು ತೀರ್ಮಾನಿಸಿದ.

ಅನೇಕ ರಾಜಕುಮಾರರು ಬೇರೆ ಬೇರೆ ದೇಶಗಳಿಂದ ಸೀತೆಯನ್ನು ವರಿಸುವ ಕನಸನ್ನು ಹೊತ್ತು ಬಂದು, ನಿರಾಶರಾಗಿ ಹಿಂತಿರುಗಿತ್ತಿದ್ದರು.

ಅದೇ ಸಮಯಕ್ಕೆ ರಾಮ, ಲಕ್ಷ್ಮಣ, ವಿಶ್ವಾಮಿತ್ರರು ಉಳಿದ ಋಷಿ ಮುನಿಗಳೊಡಗೂಡಿ ಮಿಥಿಲೆಯ ಕಡೆಗೆ ಪ್ರಯಾಣಿಸಿ ಬರುತ್ತಿದ್ದರು. ಹಾದಿಯಲ್ಲಿ ಅನೇಕ ಮಂದಿ ಋಷಿಗಳ ದರ್ಶನ ಪಡೆದು, ಗೌತಮಾಶ್ರಮಕ್ಕೆ ಬಂದರು. ಆದರೆ ಆ ಆಶ್ರಮ ನಿರ್ಜನವಾಗಿತ್ತು. ರಾಮನಿಗೆ ಆಶ್ಚರ್ಯವಾಗಿ ವಿಶ್ವಾಮಿತ್ರನನ್ನು ಗೌರವದಿಂದ ಪ್ರಶ್ನಿಸಿ ಕೇಳಿದ. “ಗುರುಗಳೇ ಇದು ಯಾರ ಆಶ್ರಮ? ಇದೇಕೆ ಹೀಗೆ ನಿರ್ಜನವಾಗಿದೆ?” ಎಂದು.

ವಿಶ್ವಾಮಿತ್ರ ರಾಮನಿಗೆ ಅಹಲ್ಯೆ, ಗೌತಮ ಋಷಿಯ ಕತೆಯನ್ನು ವಿವರಿಸಿ ತಿಳಿಸಿದರು.

ಗೌತಮ, ಅಹಲ್ಯೆಯರು ಈ ಆಶ್ರಮದಲ್ಲಿ ಧ್ಯಾನ, ಪೂಜೆ, ತಪಸ್ಸಿನಲ್ಲಿ ನಿರತರಾಗಿ ವಾಸಿಸುತ್ತಿದ್ದರು. ಒಮ್ಮೆ ಗೌತಮ ಆಶ್ರಮದಲ್ಲಿ ಇಲ್ಲದ ವೇಳೆಯಲ್ಲಿ ಇಂದ್ರನು ಅಹಲ್ಯೆಯ ಸೌಂದರ್ಯಕ್ಕೆ ಮಾರುಹೋಗಿ ಗೌತಮನ ವೇಷದಲ್ಲಿ ಅಲ್ಲಿಗೆ ಬಂದು ಅವಳ ಪ್ರೀತಿಗಾಗಿ ಯಾಚಿಸಿದ. ಅಹಲ್ಯೆ ಮೊದಲು ಗೌತಮನೆಂದೇ ಭಾವಿಸಿದಳಾದರೂ ನಂತರ ಇಂದ್ರನೆಂದು ತಿಳಿದೂ ಕ್ಷಣದ ದೌರ್ಬಲ್ಯಕ್ಕೆ ಒಳಗಾಗಿ ಅವನ ಆಸೆಯನ್ನು ಪೂರೈಸುತ್ತಾಳೆ. ಆದರೆ ಅಷ್ಟರಲ್ಲಿ ಗೌತಮ ಬರುವುದನ್ನು ಕಂಡು ಇಂದ್ರ ಮೆಲ್ಲನೆ ತಲೆಮರೆಸಿಕೊಂಡು ನುಸುಳಿ ಹೋಗಲು ಪ್ರಯತ್ನಿಸಿದ. ಗೌತಮ ಅವನನ್ನು ಹಿಡಿದು ನಿಲ್ಲಿಸಿ ಅವನಿಗೆ ಶಾಪ ಕೊಡುತ್ತಾನೆ. ಹಾಗೆಯೇ ಮಡದಿ ಅಹಲ್ಯೆಯನ್ನೂ, ನೀತಿ ಭ್ರಷ್ಟಳಾದ ಕಾರಣ ಅದೃಶ್ಯಳಾಗಿ ಅಲೆಯುತ್ತಿರುವಂತೆ ಶಪಿಸುತ್ತಾನೆ.



ಅಹಲ್ಯೆ ತನ್ನ ತಪ್ಪನ್ನು ಅರಿತು ಕ್ಷಮಿಸುವಂತೆ ಕೇಳಿಕೊಳ್ಳಲು ದಶರಥನ ಮಗನಾದ ರಾಮನು ಈ ಆಶ್ರಮದಲ್ಲಿ ಹೆಜ್ಜೆಯಿಟ್ಟಂದು ಮೊದಲಿನ ರೂಪ ಬರುತ್ತದೆ ಎಂದು ಪರಿಹಾರ ಸೂಚಿಸಿ ತಾನು ಕೂಡಲೇ ತಪಸ್ಸಿಗೆ ತೆರಳಿದ.

ಕತೆಯನ್ನು ಹೇಳಿ ಮುಗಿಸಿ ರಾಮನೊಡನೆ ಆಶ್ರಮ ಪ್ರವೇಶ ಮಾಡಿದ ಕೂಡಲೇ, ವಿಚಿತ್ರ ಕಾಂತಿಯಿಂದ ಕೂಡಿದ ಹೆಣ್ಣಿನ ರೂಪವು ಪ್ರತ್ಯಕ್ಷವಾಗಿ ನಿಂತಿತು. ರಾಮ, ಲಕ್ಷ್ಮಣರು ಗೌತಮನ ಪತ್ನಿ ಅಹಲ್ಯೆಯ ಪಾದಗಳಿಗೆ ನಮಸ್ಕರಿಸಿದರು. ಅಹಲ್ಯೆ ಅವರೆಲ್ಲರಿಗೂ ಪ್ರೀತಿಯ ಆತಿಥ್ಯವನ್ನು ನೀಡಿದಳು. ಅದೇ ಸಮಯಕ್ಕೆ ಗೌತಮನೂ ಅಲ್ಲಿಗೆ ಬಂದು, ಮಡದಿ ಅಹಲ್ಯೆಯನ್ನು ಮತ್ತೆ ಸ್ವೀಕರಿಸಿದ.

ಅಹಲ್ಯೆಯ ಉದ್ಧಾರ, ಗೌತಮರ ದರ್ಶನ ಮುಗಿದ ನಂತರ ಮಿಥಿಲೆಯತ್ತ ಪಯಣಿಸಿ ಜನಕನಲ್ಲಿಗೆ ಬಂದರು. ಅವರೆಲ್ಲರನ್ನು ಗೌರವಾದರಗಳಿಂದ ಬರಮಾಡಿಕೊಂಡು ಜನಕ ನುಡಿದ, 'ಋಷಿವರ್ಯರೇ ನನ್ನ ಈ ಯಾಗಕ್ಕೆ ತಾವು ಬಂದದ್ದು ನನಗೆ

ಸಂತೋಷವಾಗಿದೆ" ಎಂದು ನುಡಿದು, ಜೊತೆಯಲ್ಲಿದ್ದ ರಾಮ, ಲಕ್ಷ್ಮಣರತ್ತ ನೋಡುತ್ತ, "ದೈವಕಳೆಯಿಂದ ಕೂಡಿ ಮುದ್ದಾದ ಈ ಬಾಲರು ಯಾರೆಂದು ಪರಿಚಯುವಾಗಲಿಲ್ಲ. ಇವರೇಕೆ ಬಿಲ್ಲು, ಬಾಣಗಳೊಂದಿಗೆ ಬಂದಿದ್ದಾರೆಂಬುದೂ ತಿಳಿಯಲಿಲ್ಲ" ಎಂದು ನುಡಿದು, ಅವರ ಬಗ್ಗೆ ತಿಯಳಿಯುವ ಕುತೂಹಲವನ್ನು ವ್ಯಕ್ತಪಡಿಸಿದ.

ವಿಶ್ವಾಮಿತ್ರ ಅವರಿಬ್ಬರೂ ದಶರಥನ ಕುಮಾರರೆಂದೂ ತಾವು ಮಾಡುತ್ತಿದ್ದ ಯಾಗ ರಕ್ಷಣೆಗೆಂದು ಅವರನ್ನು ತಾನು ಕರೆದು ತಂದೆನೆಂದು ತಿಳಿಸಿದ. ಹಾಗೆಯೇ ಅವರು ಶಿವಧನಸ್ಸನ್ನು ನೋಡಲು ಕುತೂಹಲದಿಂದ ಇರುವವರೆಂಬುದನ್ನೂ ತಿಳಿಸಿದ. ಜನಕನಿಗೆ ವಿಶ್ವಾಮಿತ್ರನ ಮನಸ್ಸು ಅರ್ಥವಾಗಿ ಹಿಗ್ಗಿದ. ಜನಕ ಸೇವಕರಿಂದ ಆ ಧನಸ್ಸನ್ನು ಹೊತ್ತು ತರಿಸಿದ.

"ಈ ಧನುಸ್ಸು ನಮ್ಮ ಪೂರ್ವಿಕರಿಂದ ಮತ್ತು ನನ್ನಿಂದ ನಿರಂತರ ಪೂಜೆಗೊಳ್ಳುತ್ತಿದೆ. ಇದನ್ನು ರಾಮನು ನೋಡಲಿ" ಎಂದು ಧನುಸ್ಸನ್ನು ಇರಿಸಿದ ಪೆಟ್ಟಿಗೆಯ ಮುಚ್ಚಳನವನ್ನು ತೆರೆದು ತೋರಿದ.



ರಾಮ ಮೆಲ್ಲನೆ ಅದರ ಬಳಿ ಸಾಗಿ, ಒಮ್ಮೆ ಅದನ್ನು ಸೂಕ್ಷ್ಮವಾಗಿ ಗಮನಿಸಿದ. ವಿಶ್ವಾಮಿತ್ರ ಜನಕರ ಕಡೆ ಅಪ್ಪಣೆ ಕೇಳುವಂತೆ ಕಣ್ಣು ಹಾಯಿಸಿ ಬಗ್ಗಿ ಪೆಟ್ಟಿಗೆಯೊಳಗಿಂದ ಬಿಲ್ಲನ್ನು ಹೂವಿನ ಹಾರವೆನ್ನುತ್ತುವಂತೆ ಸಲೀಸಾಗಿ ಎತ್ತಿದ. ಅದಕ್ಕೆ ಬಾಣ ಹೂಡಲು ಕಟ್ಟಿದ ಹಗ್ಗವನ್ನು ಎಳೆಯಲು, ಬಿಲ್ಲು ಎರಡು ತುಂಡಾಗಿ ಮುರಿದು ಬಿತ್ತು.



ಜನಕನ ಸಂತೋಷಕ್ಕೆ ಪಾರವಿಲ್ಲದಂತಾಯಿತು. ತನ್ನ ಮಗಳಿಗೆ ಯೋಗ್ಯನಾದ ವರ ಸಿಗಲಿಲ್ಲವೆಂಬ ಕೊರಗು ಮಾಯವಾಯಿತು.

ಅಯೋಧ್ಯೆಗೆ ಸುದ್ದಿ ತಲುಪಿದ ಕೂಡಲೇ ರಾಜ ದಶರಥ. ಅವನ ಮಡದಿಯರು, ರಾಜ ಕುಟುಂಬದ ಇತರರೆಲ್ಲರೂ ಸಕಲ ಮರ್ಯಾದೆ ಗಳೊಡನೆ, ವಧುವಿಗೆ ನೀಡಲು ಅಪಾರ ವಸ್ತ್ರಾಭರಣಗಳನ್ನು ತುಂಬಿಕೊಂಡು ಮಿಥಿಲೆಯ ಕಡೆಗೆ ಪ್ರಯಾಣ ಹೊರಟರು.

ಮಿಥಿಲೆಯನ್ನು ತಲುಪಿದ ರಾಜಪರಿವಾರವನ್ನು ಜನಕಾದಿಗಳು ಸಂತೋಷಾತಿರೇಕದಿಂದ ಬರಮಾಡಿಕೊಂಡು ಅವರಿಗೆ ಉಳಿದುಕೊಳ್ಳಲು ಅದ್ದೂರಿಯ ವ್ಯವಸ್ಥೆ ಮಾಡಿದರು.

ಸೀತಾ ರಾಮರ ವಿವಾಹ ಬಹಳ ವೈಭವದಿಂದ ನಡೆಯಿತು. ರಾಮನ ವಿವಾಹದ ಜೊತೆಯಲ್ಲಿಯೇ ಲಕ್ಷ್ಮಣ, ಭರತ, ಶತ್ರುಘ್ನರ ವಿವಾಹವೂ ಊರ್ಮಿಳೆ, ಶೃತಕೀರ್ತಿ, ಮಾಂಡವಿಯರೊಂದಿಗೆ ನಡೆಯಿತು. ಅಪಾರ ಜನಸ್ತೋಮ ಸೋದರರ ವಿವಾಹವನ್ನು ವೀಕ್ಷಿಸಲೆಂದೇ ಬಂದಿತ್ತು. ಬಂದವರೆಲ್ಲರಿಗೂ ಭೂರಿ ಭೋಜನ, ಉಡುಗೊರೆ, ಕಾಣಿಕೆ, ದಕ್ಷಿಣೆಗಳನ್ನು ಕೊಟ್ಟು ಸಂತೃಪ್ತಿ ಪಡಿಸಿದರು.



## ಪರಶುರಾಮನ ಕ್ರೋಧ

ವಿವಾಹವು ವೈಭವದಿಂದ ಮುಗಿಯಿತು. ವಿಶ್ವಾಮಿತ್ರ, ರಾಮ, ಲಕ್ಷ್ಮಣರನ್ನು ದಶರಥ, ಜನಕರಿಗೆ ಒಪ್ಪಿಸಿ, ಅವರಿಂದ ಬೀಳ್ಕೊಂಡನು.

ದಶರಥನೂ ಅಯೋಧ್ಯೆಗೆ ಮರಳಿ ಹೊರಟ. ಬರುವಾಗ ದಾರಿಯಲ್ಲಿ ಕೆಲವು ಅಪಶಕುನಗಳಾದವು. ರಾಜನಿಗೆ ಭಯವಾಯಿತು. ವಸಿಷ್ಠರಲ್ಲಿ ಹೇಳಿಕೊಂಡ. ಆದರೆ ವಸಿಷ್ಠರು, ಅದಕ್ಕಾಗಿ ಹೆದರಬೇಡವೆಂದು ಹೇಳಿ ಸಮಾಧಾನಪಡಿಸಿದರು.

ಸ್ವಲ್ಪ ದೂರ ಸಾಗುವಷ್ಟರಲ್ಲಿ ಭಯಂಕರ ಬಿರುಗಾಳಿ ಎದುರಾಯಿತು. ಭೂಮಿ ಬಿರಿಯಿತು. ಇದ್ದಕ್ಕಿದ್ದಂತೆ ಕತ್ತಲು ಕವಿಯಿತು. ಇಂತಹುದರ ನಡುವಿನಿಂದ ಕೋಪಾವಿಷ್ಠನಾದ ಪರಶುರಾಮ ಕಾಣಿಸಿಕೊಂಡ. ಅಪರರುದ್ರನಂತೆ ಕಾಣಿಸುತ್ತಿದ್ದ. ಕ್ಷತ್ರಿಯ ವಿನಾಶಕ್ಕೆಂದು ಹಠ ತೊಟ್ಟು ನಿಂತಿದ್ದ. ರಾಮನನ್ನು ನೋಡುತ್ತಾ ಹೇಳಿದ. "ದಶರಥ ಕುಮಾರ ರಾಮ, ನಿನ್ನ ಬಗ್ಗೆ ಸಾಕಷ್ಟು ಕೇಳಿದ್ದೇನೆ. ಬಿಲ್ಲನ್ನು ಮುರಿದ ವಿಷಯವೂ ತಿಳಿದಿದೆ. ತೆಗೆದುಕೋ, ವಿಷ್ಣುವಿನಿಂದ ನನಗೆ ಲಭ್ಯವಾದ ಈ ಬಿಲ್ಲಿಗೆ ಹೆದೆಯೇರಿಸಬಲ್ಲೆಯಾದರೆ ನಿನ್ನ ಬಲಾಬಲವನ್ನು ಒಪ್ಪಿ ನನ್ನೊಡನೆ ಯುದ್ಧಕ್ಕೆ ಆಹ್ವಾನಿಸುತ್ತೇನೆ" ಎಂದನು.

ದಶರಥನಿಗೆ ಪರಶುರಾಮನಿಂದ ರಾಮನಿಗೆ ಏನಾಗುವುದೋ ಎಂದು ಹೆದರಿಕೆಯಾಯಿತು. ರಾಮನನ್ನು ಕ್ಷಮಿಸುವಂತೆ ಕೇಳಿಕೊಂಡ.

ಪರಶುರಾಮನ ಮಾತಿನಲ್ಲಿ ಅಹಂಕಾರ, ರೋಷಗಳು ಎದ್ದು ಕಾಣುತ್ತಿದ್ದವು. ರಾಮ ಶಾಂತಚಿತ್ತನಾಗಿ ಹೇಳಿದ, "ಜಮದಗ್ನಿಯ ಪುತ್ರನೇ, ಎಲ್ಲರನ್ನು ಹೆದರಿಸಿದಂತೆ ನನ್ನನ್ನು ಹೆದರಿಸಲಾರೆ. ನಿನ್ನ ಆ ಬಿಲ್ಲನ್ನು ಕೊಡು" ಎಂದು ಹೇಳಿ ಪರಶುರಾಮನಿಂದ ಬಿಲ್ಲನ್ನು ಪಡೆದು

ಹೆದೆಯೇರಿಸಿ ಅದಕ್ಕೆ ಬಾಣ ಹೂಡುತ್ತಾ ನುಡಿದ, "ಇದೋ ನೀನು ಹೇಳಿದಂತೆ, ಬಾಣವೇರಿಸಿದ್ದೇನೆ. ಹೂಡಿದ ಬಾಣವನ್ನು ಹಿಂತೆಗೆದು ಕೊಳ್ಳಲಾರೆ. ಯಾವುದರ ಮೇಲಾದರೂ ಪ್ರಯೋಗಿಸಲೇಬೇಕು. ಹೇಳು ನಿನ್ನ ಸಂಚಾರವನ್ನು ನಿಲ್ಲಿಸಲೇ ಅಥವಾ ನಿನ್ನ ತಪಸ್ಸಿನ ಫಲವನ್ನು ಮುಗಿಸಿಬಿಡಲೇ?"

ಪರಶುರಾಮ ಮೆದುವಾದ. ವಿನಯದಿಂದ ನುಡಿದ, "ನನಗೆ ನೀನು ಯಾರೆಂಬುದು ತಿಳಿಯಿತು. ನನ್ನೆಲ್ಲ ತಪಸ್ಸಿನ ಫಲವನ್ನು ನಿನಗೆ ಧಾರೆಯೆರೆಯುತ್ತೇನೆ. ನಿನ್ನ ಬಾಣಕ್ಕೆ ನನ್ನ ತಪಸ್ಸು ಆಹುತಿಯಾಗಲಿ" ಎಂದು ನುಡಿದು ರಾಮನಿಗೆ ಪ್ರದಕ್ಷಿಣೆ ಹಾಕಿ, ಅಲ್ಲಿಂದ ಹೊರಟುಬಿಟ್ಟ. ಪರಶುರಾಮನ ಬಿಲ್ಲು ರಾಮನಲ್ಲಿಯೇ ಉಳಿಯಿತು. ರಾಜ ಪರಿವಾರಕ್ಕೆ ಸಂತೋಷವಾಯಿತು. ಎದುರಾಗಿದ್ದ ಅನಿಷ್ಟ, ಸಂಕಷ್ಟಗಳು ಕರಗಿ ಹೋದವು.

ಅಯೋಧ್ಯೆಗೆ ಮರಳಿದ ಮೇಲೆ ಕೆಲವು ಕಾಲ ರಾಮ ಸೀತೆಯರು ಅನ್ಯೋನ್ಯವಾಗಿ ಪ್ರೀತಿಯಿಂದ ಬಾಳಿದರು. ಪ್ರಜೆಗಳು ರಾಜದಂಪತಿಗಳ ಗುಣ, ನಡತೆ, ಲಾವಣ್ಯಗಳಿಗೆ ಮನಸೋತು ಸದಾ ಅವರ ಒಳಿತನ್ನು ಹಾರೈಸುತ್ತಿದ್ದರು.



# ರಾಮನ ಯುವ ರಾಜ್ಯಾಭಿಷೇಕ

ರಾಮ ಎಲ್ಲ ವಿಧದಲ್ಲಿಯೂ ಸಮರ್ಥ, ಪರಿಪೂರ್ಣ ಎನಿಸಿಕೊಂಡಿದ್ದ. ಒಬ್ಬ ಆದರ್ಶ ರಾಜನಾಗಲು ಅಗತ್ಯವಾದ ಗುಣಗಳೆಲ್ಲವೂ ಅವನಲ್ಲಿದ್ದವು.

ದಶರಥ ತನಗೆ ವಯಸ್ಸಾಗುತ್ತಿದೆಯೆಂಬುದನ್ನು ಮನಸ್ಸಿಗೆ ತಂದುಕೊಂಡು, ಆದಷ್ಟು ಬೇಗ ರಾಮನಿಗೆ ಯುವ ರಾಜ್ಯಾಭಿಷೇಕ ಮಾಡಬೇಕೆಂದು ಆಲೋಚಿಸಿದ. ತನ್ನ ಮನದ ಇಂಗಿತವನ್ನು ಮಂತ್ರಿಗಳೊಂದಿಗೆ ಹೇಳಿಕೊಂಡ. ಅವರಿಗೂ ಸಂತೋಷವಾಯಿತು. ಒಂದು ದಿನ ಮಂತ್ರಾಲೋಚನಾ ಸಭೆಯನ್ನು ಕರೆದ.

ಸಭೆಯಲ್ಲಿ ಮಂತ್ರಿಗಳು, ಮಂತ್ರಿ ಪ್ರಧಾನರು, ಕುಲಗುರುಗಳು, ಪ್ರಜಾಪ್ರತಿನಿಧಿಗಳು ಎಲ್ಲರೂ ಸೇರಿದ್ದರು. ದಶರಥ ಎದ್ದು ನಿಂತು ಸಭೆಯನ್ನು ಉದ್ದೇಶಿಸಿ ನುಡಿದ, "ಪೂಜ್ಯರೇ, ಮಂತ್ರಿಗಳೇ, ಪ್ರಜಾಪ್ರತಿನಿಧಿಗಳೇ, ನಿಮಗೆಲ್ಲ ತಿಳಿದಂತೆ, ನನ್ನ ವಂಶಜರು, ತಮಗೆ ವಯಸ್ಸಾಗುತ್ತಿದ್ದಂತೆ, ರಾಜ್ಯಭಾರವನ್ನು ತಮ್ಮ ಜೇಷ್ಠ ಪುತ್ರರಿಗೆ ಒಪ್ಪಿಸಿ, ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುತ್ತಿದ್ದರು. ಅಂತೆಯೇ ನಾನೂ, ನನಗೂ ವಯಸ್ಸಾಗುತ್ತಿರುವುದರಿಂದ ನನ್ನ ಪ್ರಿಯ ಪುತ್ರನೂ, ಜೇಷ್ಠನೂ ಆದ ರಾಮನಿಗೆ ಯುವರಾಜ್ಯಾಭಿಷೇಕ ಮಾಡಬೇಕೆಂದು ಆಲೋಚಿಸುತ್ತಿದ್ದೇನೆ. ತಾವು ಇದರ ಬಗ್ಗೆ ತಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ವಿನಯದಿಂದ ಕೈಮುಗಿದ. ರಾಜನ ಮಾತಿಗೆ ಎಲ್ಲರೂ ಸಮ್ಮತಿಸಿದರು. ಕೆಲವರಂತೂ ರಾಮನ ಗುಣಗಳನ್ನು ಕೊಂಡಾಡಿದರು. ಆದಷ್ಟು ಬೇಗ ರಾಜ್ಯಾಭಿಷೇಕವನ್ನು ಮಾಡುವಂತೆ ಸೂಚಿಸಿದರು.

ಅವರೆಲ್ಲರ ಒಪ್ಪಿಗೆಯಿಂದ ರಾಜನಿಗೆ ಸಂತೋಷವಾಯಿತು. ತಮ್ಮ ಕುಲಗುರುಗಳಾದ ವಸಿಷ್ಠರನ್ನು, ವಾಮದೇವರನ್ನು ಒಂದುಶುಭ

ಮುಹೂರ್ತ ಸೂಚಿಸುವಂತೆ ಕೇಳಿಕೊಂಡನು. ಚೈತ್ರಮಾಸ ಒಳ್ಳೆಯದೆಂದು ತಿಳಿಸಿ, ಒಂದು ಶುಭ ಮುಹೂರ್ತವನ್ನೂ ನಿಶ್ಚಯಿಸಿದರು.

ದಶರಥನು ಸಭೆಯಲ್ಲಿ ಎಲ್ಲ ನಿರ್ಧಾರವಾದ ಮೇಲೆ ಸುಮಂತ್ರನನ್ನು ಕಳಿಸಿ ರಾಮನನ್ನು ಬರಮಾಡಿಕೊಂಡನು. ರಾಮನಿಗೆ ವಿಷಯವೇನೆಂದು ತಿಳಿದಿರಲಿಲ್ಲ. ಅಲ್ಲಿಗೆ ಬಂದ ಮೇಲೆ ತನಗೆ ಯುವರಾಜ್ಯಾಭಿಷೇಕ ಮಾಡುವ ವಿಚಾರ ತಿಳಿದು ಬಂತು. ಸಭೆಯಲ್ಲಿ ಇರುವ ಎಲ್ಲರಿಗೂ ವಂದಿಸಿ ಹೇಳಿದ. "ಹಿರಿಯರೇ, ಪೂಜ್ಯರೇ, ನನಗೆ ರಾಜನಾಗಬೇಕೆಂಬ ಹಂಬಲವಿಲ್ಲ. ಆದರೆ ತಮ್ಮೆಲ್ಲರ ಆಜ್ಞೆಯನ್ನು ಶಿರಸಾವಹಿಸ ಬೇಕೆಂಬುದಕ್ಕೆ ವಿನಯದಿಂದ ಒಪ್ಪಿಕೊಳ್ಳುತ್ತಿದ್ದೇನೆ."

ದಶರಥನಿಗೆ ಮಗನ ವಿನಯಶೀಲತೆ ಮೆಚ್ಚುಗೆಯಾಯಿತು. ಮಗನಿಗೆ ಒಂದಿಷ್ಟು ಬುದ್ಧಿವಾದ ಹೇಳಿದ.

"ಮಗು ಎಂದೂ ನಿನ್ನ ಅಹಂಕಾರವನ್ನು ಪ್ರದರ್ಶಿಸಬೇಡ. ಸಾಧ್ಯ ವಾದಷ್ಟೂ ಒಳ್ಳೆಯದನ್ನು ಮಾಡುವುದಕ್ಕೆ ಪ್ರಯತ್ನಿಸು. ನಿನ್ನ ನಡತೆ, ಘನತೆಗಳನ್ನು ಉಳಿಸಿಕೊಂಡು ಕೀರ್ತಿವಂತನಾಗಿ ರಾಜ್ಯಭಾರ ಮಾಡು." ರಾಮ ಎಲ್ಲವನ್ನೂ ಗಂಭೀರವಾಗಿ ಕೇಳಿಸಿಕೊಂಡ.

ತಂದೆಯ ಮಾತುಗಳನ್ನು ಕೇಳಿಕೊಂಡು ಅರಮನೆ ಪ್ರವೇಶಿಸಿದ್ದನೋ ಇಲ್ಲವೋ ಮತ್ತೆ ಸುಮಂತ್ರನು ಬಂದು ದಶರಥನು ಬರಹೇಳಿರುವ ವಿಷಯವನ್ನು ತಿಳಿಸಿದನು.

ರಾಮನಿಗೆ ಆಶ್ಚರ್ಯವಾಯಿತು. ಈಗಷ್ಟೇ ಬಂದ ತನ್ನನ್ನು ಮತ್ತೇಕೆ ಬರಹೇಳಿದ್ದಾನೆಂಬುದನ್ನು ಊಹಿಸಲು ಆಗಲಿಲ್ಲ. ತನ್ನಲ್ಲೇ ಆಲೋಚಿಸಿದ. "ನನ್ನ ಯುವರಾಜ್ಯಾಭಿಷೇಕವನ್ನು ಮಾಡಬೇಕೆಂದು ನಿಶ್ಚಯಿಸಿದ ಮೇಲೆ, ಏನಾದರೂ ತೊಂದರೆ ಎದುರಾಗಿರಬಹುದು. ಇರಲಿ ಅವರ ಆಜ್ಞೆ ಮೀರಬಾರದೆಂದು ಒಪ್ಪಿಕೊಂಡೆನೆ ಹೊರತು ನನಗೆ ರಾಜ್ಯಮೋಹವಿಲ್ಲ. ಆದ್ದರಿಂದ ಈಗ ಬೇಡವೆಂದರೆ, ಅದೂ ನನಗೆ ಸಂತೊಷವೇ!" ಎಂದುಕೊಳ್ಳುತ್ತಾ ತಂದೆಯಿದ್ದಲ್ಲಿಗೆ ಬಂದ.

ಬಂದ ರಾಮನನ್ನು ಕರೆದು ಪಕ್ಕದಲ್ಲಿಯೇ ಕೂರಿಸಿಕೊಂಡು ಆಪ್ತನಾದ ರೀತಿಯಲ್ಲಿ ಮಾತಿಗೆ ಆರಂಭಿಸಿದ, "ಮಗೂ ರಾಜನಾಗಿ ನಾನು ಹಲವು ಕಾಲ ರಾಜ್ಯಭಾರದ ನಿರ್ವಹಣೆ ಮಾಡಿದ್ದೇನೆ. ಯಾವ ಕರ್ತವ್ಯಕ್ಕೂ ಚ್ಯುತಿ ತಂದಿಲ್ಲ. ಈಗ ಇನ್ನು ನಾನು ಮಾಡುವುದು ಏನೂ ಇಲ್ಲ. ಆದರೆ ಉಳಿದಿರುವ ಒಂದೇ ಒಂದು ಆಸೆ, ನಿನ್ನನ್ನು ಯುವರಾಜನನ್ನಾಗಿ ಘೋಷಿಸಿ, ನನ್ನ ಹಿರಿಯರು ಕುಳಿತಿದ್ದ ಸಿಂಹಾಸನದ ಜವಾಬ್ದಾರಿಯನ್ನು ನಿನಗೆ ಒಪ್ಪಿಸುವುದು. ಯಾಕೋ ನನ್ನ ಮನಸ್ಸಿಗೆ ಕಸಿವಿಸಿಯಾಗುತ್ತಿದೆ. ಯಾವುದೋ ಕೇಡು ಒದಗಲಿದೆ ಎಂದು ನನಗನಿಸುತ್ತಿದೆ. ಆದ್ದರಿಂದ ಆದಷ್ಟು ಬೇಗ ನಾಳೆಯೇ ನಿನ್ನ ಯುವರಾಜ್ಯಾಭಿಷೇಕವನ್ನು ಮುಗಿಸಿಬಿಡಬೇಕೆಂದಿದ್ದೇನೆ."

ಮರುದಿನವೇ ರಾಜ್ಯಾಭಿಷೇಕವೆಂದು ತೀರ್ಮಾನವಾಗಿ ಸಕಲ ಸಿದ್ಧತೆಗಳು ನಡೆದವು. ರಾಮನಿಂದ ಕೌಸಲ್ಯೆಗೆ ಮತ್ತು ಇತರ ರಾಣಿಯರಿಗೂ ಸುದ್ದಿ ಮುಟ್ಟಿತು. ರಾಮನಿಗೆ ರಾಜ್ಯಾಭಿಷೇಕ ಎಲ್ಲರಿಗೂ ಸಂತೋಷದ ವಿಷಯವಾಗಿತ್ತು.

ಅಯೋಧ್ಯೆ ಇಂದ್ರನಗರಿ ಅಮರಾವತಿಯಂತೆ ಕಂಗೊಳಿಸಿತು. ಪ್ರಜೆಗಳ ಸಂತೋಷಕ್ಕೆ ಪಾರವಿಲ್ಲದಂತಾಯಿತು.

ರಾಮ, ಸೀತೆಯರು ಹಿಂದಿನ ದಿನದಿಂದಲೇ ದೀಕ್ಷಾಬದ್ಧರಾದರು. ಪುರೋಹಿತರು ಶಾಸ್ತ್ರೋಕ್ತವಾಗಿ ರಾಜ್ಯಾಭಿಷೇಕ ನೆರವೇರಿಸಲು ಬೇಕಾದ ಎಲ್ಲವನ್ನೂ, ಪವಿತ್ರ ತೀರ್ಥಗಳನ್ನೂ ತರಿಸಿಕೊಂಡು ಇರಿಸಿದರು. ಆದರೂ ದಶರಥನ ಮನಸ್ಸಿನಲ್ಲಿ ಯಾವುದೋ ಭೀತಿ ಆವರಿಸಿತ್ತು.

ಮರುದಿನ ಮುಹೂರ್ತ ಸಮೀಪಿಸುತ್ತಿದ್ದಂತೆ, ರಾಮ, ಸೀತೆಯರು ಎದ್ದು ಇನ್ನೇನು ಅರಮನೆ ಕಡೆಗೆ ಹೊರಡಬೇಕು ಎನ್ನುವಷ್ಟರಲ್ಲಿ ರಾಮನಿಗೆ ತುರ್ತು ಕರೆ ಬಂತು. ಒಮ್ಮೆಲೇ, ರಾಮನಿಗೆ ಆಶ್ಚರ್ಯವು ಆತಂಕವೂ ಆಯಿತು.

ಕೈಕೆಯಿ ಬಳಿಯಲ್ಲಿ ಅವಳ ಆಪ್ತ ದಾಸಿಯೊಬ್ಬಳು ಮಂಥರೆ ಎಂಬುವಳಿದ್ದಳು. ಸಣ್ಣ ಮಗುವಾಗಿದ್ದಾಗಿನಿಂದಲೂ ಕೈಕೆಯನ್ನು ಎತ್ತಿ

ಮುದ್ದಾಡಿಸಿದವಳು. ಕೈಕೆಗೆ ಅವಳು ತಾಯಿಯಂತೆಯೂ, ಸಖಿಯಂತೆಯೂ ದಾಸಿಯಂತೆಯೂ, ಹಿತಚಿಂತಕಳಂತೆಯೂ ಇದ್ದಳು.

ಕೈಕೆಗಿಂತ ಮೊದಲೇ ರಾಮನ ರಾಜ್ಯಾಭಿಷೇಕದ ವಿಷಯ ತಿಳಿದು ಕೈಕೆಯ ಬಳಿಗೆ ಆತುರದಿಂದ ಓಡಿದಳು. ಆದರೆ ಅವಳಿಗೆ ಅಲ್ಲಿ ಕಂಡದ್ದು ಆಶ್ಚರ್ಯವಾಗಿತ್ತು. ಕೈಕೆಗೂ ವಿಷಯ ತಿಳಿದಿದ್ದು, ಆ ಉತ್ಸವದಲ್ಲಿ ಭಾಗವಹಿಸಲು ಸಂಭ್ರಮದಿಂದ ಸಂತೋಷದಿಂದ ವಿಶೇಷವಾಗಿ ಅಲಂಕರಿಸಿಕೊಂಡಿದ್ದಳು. ಅದನ್ನು ಕಂಡ ಮಂಥರೆ ದಿಗ್ಭ್ರಾಂತಳಾಗಿ, "ಕೈಕೆ ಏನಿದು ನಿನ್ನ ಅವತಾರ? ನಿನಗೂ ನಿನ್ನ ಮಗನಿಗೂ ಪ್ರಾಣ ಸಂಕಟ ಎದುರಾಗಿರುವಾಗ, ಏನೂ ಅರಿಯದ ಅಜ್ಞಾನಿಯಂತೆ ಸಂತೋಷದಿಂದ ಬೀಗುತ್ತಿರುವೆಯಲ್ಲ! ನಿನ್ನ ಹುಚ್ಚುತನಕ್ಕೆ ಏನು ಹೇಳಬೇಕು?" ಎಂದಳು.

"ಯಾಕೆ ಮಂಥರೆ ಹೀಗೆಲ್ಲ ಏನೇನೋ ಬಡಬಡಿಸುತ್ತಿರುವೆಯಲ್ಲಾ! ನಿನಗೆ ತಿಳಿದಿಲ್ಲವೇನು. ನನ್ನ, ನಮ್ಮೆಲ್ಲರ ಪ್ರೀತಿಯ ಪುತ್ರ ರಾಮನಿಗೆ ಇಂದು ಯುವ ರಾಜ್ಯಾಭಿಷೇಕ. ನಮಗೆಲ್ಲರಿಗೂ ಎಷ್ಟು ಸಂತೋಷವಾಗಿದೆ, ಊಹಿಸಬಲ್ಲೆಯಾ?" ಎಂದು ಹರ್ಷದಿಂದ ಹೇಳಿದಳು.

"ಮೂರ್ಖಳೇ! ತಲೆ ಮೇಲೆ ಆಕಾಶ ಕಳಚಿ ಬೀಳುತ್ತಿರುವಾಗ ನೀನು ನೆಮ್ಮದಿಯಿಂದ ಹೀಗೆ ಕುಳಿತಿದ್ದಿಯಲ್ಲ ನಿನ್ನ ಭವಿಷ್ಯ ಏನಾಗುವುದೋ ತಿಳಿದಿರುವೆಯೇನು? ರಾಮನನ್ನು ಯುವರಾಜನನ್ನಾಗಿ ಮಾಡಲಿದ್ದಾರೆ. ಹಾಗಾದರೆ ನೀನು, ನಿನ್ನ ಮಗನ ಸ್ಥಿತಿಯೇನು? ಭಿಕಾರಿಗಳಂತೆ ಬಾಳಬೇಕು ನೀನೇನೋ ನೆಮ್ಮದಿಯಿಂದ ಇರಬಲ್ಲೆ. ಆದರೆ ನಿನ್ನ ಸ್ಥಿತಿಯನ್ನು ನೆನೆಸಿಕೊಂಡರೆ ಪ್ರಾಣ ಹೋದಂತಾಗಿದೆ ನನಗೆ."

ಕೈಕೆಗೆ ಅವಳು ಮಾತುಗಳು ಅರ್ಥವಾಗಲಿಲ್ಲ. ಇಡೀ ನಗರವೇ ಇಷ್ಟೊಂದು ಸಂಭ್ರಮ ಪಡುತ್ತಿರುವಾಗ ಇವಳೇಕೆ ಹೀಗೆ ನಡೆದು ಕೊಳ್ಳುತ್ತಿದ್ದಾಳೆ ಎನಿಸಿತ್ತು.

"ಮಂಥರೆ ಎಂಥ ಒಳ್ಳೆ ಸುದ್ದಿಯನ್ನು ಹೇಳಿ, ಏನೇನೋ ಮಾತನಾಡುತ್ತಿರುವೆಯಲ್ಲ. ರಾಮ ರಾಜನಾದರೆ ಅದಕ್ಕಿಂತ ಬೇರೆ ಸಂತೋಷ

ಏನಿದೆ? ರಾಮ ನಮ್ಮೆಲ್ಲರ ಪ್ರಿಯ ಪುತ್ರ. ಅಲ್ಲದೆ ವಂಶಪಾರಂಪರ್ಯದಂತೆ ಹಿರಿಯ ಪುತ್ರನಾದವನಿಗೆ ರಾಜ್ಯಾಭಿಷೇಕವಾಗಲಿದೆ. ಇದರಲ್ಲಿ ಯಾರಿಗೇನು ನಷ್ಟ? ಹೀಗೇಕೆ ಹಾರಾಡುತ್ತಿದ್ದೀಯೇ?" ಎಂದು ಸಮಾಧಾನದಿಂದ ನುಡಿದಳು ಮತ್ತು ಸಂತಸದ ಸುದ್ದಿ ತಂದುದಕ್ಕಾಗಿ ತನ್ನ ಕೊರಳಿನಲ್ಲಿದ್ದ ಹಾರವನ್ನು ತೆಗೆದುಕೊಟ್ಟಳು. ಮಂಥರೆ ಆ ಹಾರವನ್ನು ಕೋಪದಿಂದ ದೂರಕ್ಕೆ ಎಸೆದಳು.

"ಮೂರ್ಖ ಹೆಣ್ಣೆ. ನಿನ್ನನ್ನು ನೋಡಿ ನಗಬೇಕೋ ಅಳಬೇಕೋ ತಿಳಿಯುತ್ತಿಲ್ಲ. ನಿನ್ನ ಮಗ ಭರತನ ಸ್ಥಿತಿಯ ಬಗ್ಗೆ ಆಲೋಚಿಸು. ರಾಮ ರಾಜನಾದರೆ ನೀವಿಬ್ಬರೂ ಅವರಿಗೆ ಗುಲಾಮರಾಗಿರಬೇಕು. ಯೋಚಿಸು. ಅವಕಾಶ ತಪ್ಪಿ ಹೋಗುವುದಕ್ಕೆ ಮೊದಲೇ ಏನಾದರೂ ಮಾಡು. ಕೌಸಲ್ಯೆ ರಾಜಮಾತೆಯಾಗುತ್ತಾಳೆ. ಎಲ್ಲ ಗೌರವ ಸನ್ಮಾನ ಅವಳಿಗೆ ಸಲ್ಲುತ್ತದೆ. ಭರತನಿದ್ದೂ ಇಲ್ಲದಂತಾಗುತ್ತಾನೆ. ಅದಕ್ಕಾಗಿ ರಾಮನನ್ನೇ ಇಲ್ಲದಂತೆ ಮಾಡು. ಅವನನ್ನು ವನವಾಸಕ್ಕೆ ಕಳಿಸು. ಭರತನನ್ನು ರಾಜನನ್ನಾಗಿ ಮಾಡು" ಎಂದು ಅವಳ ತಲೆ ತುಂಬಾ ಇಲ್ಲದ ವಿಚಾರಗಳನ್ನು ತುಂಬಿದಳು. ಮಂಥರೆಯ ಮಾತುಗಳ ಅರ್ಥ ಕೈಕೆಗೆ ಈಗ ಹೊಳೆಯತೊಡಗಿತು.

ಮುಂದೇನು ಮಾಡಬೇಕೆಂದು ತೋಚದೆ ಹೋದಾಗ ಮಂಥರೆಯೇ ಉಪಾಯವನ್ನು ಸೂಚಿಸಿದಳು. ದಶರಥನು ಹಿಂದೊಮ್ಮೆ ಅವಳಿಗೆ ಕೊಟ್ಟಿದ್ದ ವರಗಳನ್ನು ನೆನಪಿಸಿದಳು. ಒಂದು ವರಕ್ಕೆ ರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ಕಳುಹಿಸಬೇಕೆಂದು, ಎರಡನೆಯ ವರಕ್ಕೆ ಭರತನಿಗೆ ರಾಜ್ಯಾಭಿಷೇಕ ಮಾಡಬೇಕೆಂದು ಸೂಚಿಸಿದಳು.

ಈಗ ಕೈಕೆಗೆ ಎಲ್ಲವೂ ಅರ್ಥವಾಯಿತು. ಮಂಥರೆಯ ಬೋಧನೆ ಮನಸ್ಸಿಗೆ ಇಳಿಯಿತು. ಕೂಡಲೇ ತನ್ನೆಲ್ಲ ಆಭರಣಗಳನ್ನು ಕಳಚಿ ಬಿಸಾಡಿ, ಕೋಪಗೃಹದಲ್ಲಿ ಬಿದ್ದು ಕೊಂಡಳು. ದಶರಥನು ತನಗೆ ಕೊಟ್ಟಿದ್ದ ವರಗಳ ನೆನಪು ಮರುಕಳಿಸಿತು. ಮಂಥರೆ ಹೇಳುವಂತೆ, ಇಷ್ಟು ಆತುರಾತುರವಾಗಿ ಯುವರಾಜ್ಯಾಭಿಷೇಕ ಮಾಡಬೇಕೆಂದರೆ ಬಲವಾದ ಕಾರಣ ಇರಬೇಕು.

ಕಾಲ ಮಿಂಚಿ ಹೋಗುವ ಮುನ್ನ ವರಗಳ ನೆರವಿನಿಂದ ಬಯಸಿದ್ದನ್ನು ಸಾಧಿಸಿಕೊಳ್ಳಬೇಕೆನಿಸಿತು.

ಸಭೆ ಮುಗಿಸಿ ಸಿದ್ಧತೆಗಳನ್ನು ನಡೆಸಲು ಆಜ್ಞೆ ಕೊಟ್ಟು ದಶರಥ ಕೈಕೆಯ ಕೊಠಡಿಯಲ್ಲಿಗೆ ಬಂದು ಒಳ ಹೊಕ್ಕು ನೋಡಿದನು. ಆದರೆ ಎಲ್ಲಿಯೂ ಕೈಕೆಯ ಸುಳಿವು ಕಾಣಲಿಲ್ಲ. ತಾನು ಬರುವುದನ್ನೇ ಕಾಯುತ್ತಾ, ಬಂದ ಕೂಡಲೇ ಓಡಿ ಬಂದು ಸ್ವಾಗತಿಸುತ್ತಿದ್ದ ಕೈಕೆ ಕಾಣದೆ ಹೋದದ್ದು ಒಂದು ಕಡೆ ಆಶ್ಚರ್ಯವೆನಿಸಿದರೆ ಮತ್ತೊಂದು ಕಡೆ ಅನಾಹುತದ ಅವ್ಯಕ್ತ ಭೀತಿ ಕಾಡಿತು. ಅವಳ ದಾಸಿಯೊಬ್ಬಳಿಂದ ಕೈಕೆ ಕೋಪಗೃಹದಲ್ಲಿ ಇದ್ದಾಳೆಂಬ ಸುದ್ದಿ ಕೇಳಿದ. ಕೂಡಲೇ ಕೋಪಗೃಹಕ್ಕೆ ತೆರಳಿದ. ಅಧೈರ್ಯದಿಂದಲೇ ಮೆಲ್ಲನೆ ಬಳಿಗೆ ಸಾರಿ ಸಮಾಧಾನಪಡಿಸಲು ಯತ್ನಿಸಿದ. ಅವಳಿಗೆ ಏನಾಗಿದೆ ಎಂದು ವಿಚಾರಿಸಿದ.



"ಹೇಳು ಕೈಕಾ ನನ್ನಿಂದಾಗಲೀ ಯಾರಿಂದಾಗಲೀ ನಿನಗೇನಾದರೂ ಅನ್ಯಾಯವಾಗಿದೆಯೇ? ಅವಮಾನವಾಗಿದೆಯೇ?" ಎಂದು ಮೆದುವಾಗಿ ಕೇಳಿದ.

ಕೈಕೆ ಸ್ವಲ್ಪ ಹೊತ್ತು ಸುಮ್ಮನಿದ್ದು, ನಂತರ ಒಂದು ದೀರ್ಘ ಉಸಿರುಬಿಟ್ಟು, "ಮಹಾರಾಜ ಅನ್ಯಾಯವಾಗಿರುವುದು ಬೇರೆ ಯಾರಿದಂದಲೂ ಅಲ್ಲ, ನಿಮ್ಮಿಂದಲೇ!" ಎಂದಳು.

ದಶರಥನಿಗೆ ಅರ್ಥವಾಗಲಿಲ್ಲ. "ಏನು, ನಾನು ನಿನಗೆ ಅನ್ಯಾಯ ಮಾಡಿದೆನೇ?" ಅನುಮಾನಿಸುತ್ತಾ ನುಡಿದ.

"ಹೌದು. ನೀವು ಮಾಡಿದ ಅನ್ಯಾಯ ಸರಿಪಡಿಸುವುದಾಗಿ ಮಾತು ಕೊಟ್ಟರೆ ಮಾತ್ರ ಹೇಳುತ್ತೇನೆ" ಎಂದಳು.

"ಹೇಳು. ನನ್ನಿಂದ ಅನ್ಯಾಯವಾಗಿದ್ದರೆ ಖಂಡಿತ ಸರಿಪಡಿಸುತ್ತೇನೆ. ಅಲ್ಲದೆ ನೀನು ಏನು ಬಯಸಿದರೆ ಅದನ್ನು ಪೂರೈಸುತ್ತೇನೆ." ಭರವಸೆ ನೀಡುತ್ತಾ ಹೇಳಿದ.

"ಹಾಗಾದರೆ ರಾಮನಿಗೆ ಯುವರಾಜ್ಯಾಭಿಷೇಕ ಮಾಡಿ ಭರತನಿಗೆ ಅನ್ಯಾಯ ಮಾಡುವುದನ್ನು ನಿಲ್ಲಿಸಿ ನನಗೆ ನೀಡಿದ ವರಗಳನ್ನು ಪೂರೈಸಿ" ಎಂದಳು.

"ರಾಮನ ಯುವರಾಜ್ಯಾಭಿಷೇಕ ನ್ಯಾಯವಾಗಿಯೇ ಇದೆಯಲ್ಲ. ಸಂಪ್ರದಾಯದಂತೆ ಹಿರಿಯನಿಗೆ ಪಟ್ಟ ಕಟ್ಟುವುದು ಹೇಗೆ ಅನ್ಯಾಯ? ಇನ್ನು ನೀನು ಬೇಡುವ ವರಗಳಾದರೂ ಏನು?" ಎಂದನು.

"ಸಂಪ್ರದಾಯ, ವಂಶ ಪರಂಪರೆ ಅದು ಯವುದೂ ನನಗೆ ಗೊತ್ತಿಲ್ಲ. ಆದರೆ ನನ್ನ ಎರಡು ವರಗಳ ಪೂರೈಕೆಗೆ ಹದಿನಾಲ್ಕು ವರ್ಷ ರಾಮನ ವನವಾಸ ಮತ್ತು ಭರತನ ರಾಜ್ಯಾಭಿಷೇಕ ಇವೇ ನನ್ನ ಬೇಡಿಕೆ" ಎಂದಳು.

ಕೈಕೆಯ ಕರ್ಣ ಕಠೋರ ಮಾತುಗಳನ್ನು ಕೇಳುತ್ತಿದ್ದಂತೆ ದಶರಥ ಒಮ್ಮೆಲೇ ಮೂರ್ಛೆ ಹೋದ. ಅವನ ಮನಸ್ಸಿನ ಮೇಲೆ ತೀವ್ರವಾದ ಆಘಾತವಾಯಿತು. ಸ್ವಲ್ಪ ಹೊತ್ತಿನ ನಂತರ ಚೇತರಿಸಿಕೊಂಡ. ಕೈಕೆಯ ಕಡೆ ಒಮ್ಮೆ ಕ್ರೋಧದಿಂದ ದೃಷ್ಟಿ ಹಾಯಿಸಿದ. ಅವನು ತನ್ನೆಡೆ ನೋಡಿದ ರೀತಿಯಿಂದ ಕೈಕೆ ನಡುಗಿ ಹೋದಳು.

"ಓ ರಾಕ್ಷಸಿ ಹೆಣ್ಣೆ, ನನ್ನ ಪ್ರಾಣವಾಗಿರುವ ರಾಮನ ವಿಚಾರದಲ್ಲಿ ಇಷ್ಟೊ ಕ್ರೂರವಾಗಲು ನಿನಗೆ ಮನಸ್ಸು ಬಂತಾದರೂ ಹೇಗೆ? ಕುಲ ಕಳಂಕಿನಿ. ತಾಯಿಗಿಂತ ಹೆಚ್ಚಾಗಿ ಪ್ರೀತಿಸಿದ ಅವನ ಬಗ್ಗೆ ಹೀಗೆ

ನಡೆದುಕೊಳ್ಳುವುದೇ? ನಿಜವಾಗಿಯೂ ನೀನು ಹೆಣ್ಣಲ್ಲ. ವಿಷ ಸರ್ಪ. ನನ್ನ ಪ್ರಾಣ ತೆಗೆಯಲೆಂದೇ ನಿಂತವಳು ನೀನು. ಯಾವ ಕಾರಣಕ್ಕಾಗಿ ಅವನನ್ನು ಕಾಡಿಗೆ ಕಳಿಸಲಿ? ಕೌಸಲ್ಯೆಗೆ ಏನೆಂದು ಸಮಾಧಾನ ಹೇಳಲಿ? ಪ್ರಜೆಗಳಿಗೆ ರಾಮನ ಪಟ್ಟಾಭಿಷೇಕ ತಪ್ಪಿಸಿದ್ದಕ್ಕೆ ಏನು ಸಮರ್ಥನೆ ನೀಡಲಿ?"

ದಶರಥನ ದುಃಖ ದುಗುಡ ಯಾವುದೂ ಅವಳ ಮನಸ್ಸನ್ನು ಕರಗಿಸಲಿಲ್ಲ. ಕೊಟ್ಟ ಮಾತನ್ನು ನಡೆಸಿಕೊಡಬೇಕೆಂದು ಹಠ ಹಿಡಿದಳು. ಮಾತಿಗೆ ತಪ್ಪಿ ವಂಶಕ್ಕೆ ಅಪಕೀರ್ತಿ ತರಬೇಡೆಂದು ಅವನಿಗೇ ಬುದ್ಧಿ ಹೇಳಿದಳು.

"ನೀನೇನಾದರೂ ನಿನ್ನ ಮಾತಿನಂತೆ ನಡೆಯದಿದ್ದರೆ ನಿನ್ನ ಕಣ್ಮುಂದೆಯೇ ವಿಷ ಕುಡಿದು ಸಾಯುತ್ತೇನೆ. ಇದಂತೂ ಖಂಡಿತ. ಆಮೇಲೆ ನಿನ್ನ ರಾಮನನ್ನು ರಾಜನಾಗಿ ಬೇಕಾದರೆ ಮೆರೆಸು" ಎಂದು ಬೆದರಿಕೆ ಹಾಕಿದಳು.

ಅವಳ ಮಾತಿನ ಹೊಡೆತಕ್ಕೆ ಮರ ಕೆಳಗೆ ಉರುಳುವಂತೆ ಉರುಳಿ ಬಿದ್ದ. ಅವನ ಪ್ರಾರ್ಥನೆ, ಸಂಕಟಗಳು ಅವಳ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ. ಪ್ರಜ್ಞಾಶೂನ್ಯನಾಗಿ ಬಿದ್ದಿದ್ದು ನಂತರ ಶೂನ್ಯದತ್ತ ನೋಡುತ್ತಾ ರಾತ್ರಿಯನ್ನೆಲ್ಲ ಕಳೆದ.

ವಸಿಷ್ಠರು ಬೆಳಿಗ್ಗೆ ದಶರಥನಿಗಾಗಿ ಸುಮಂತ್ರನ ಮೂಲಕ ಹೇಳಿ ಕಳಿಸಿದರು. ಸುಮಂತ್ರ ರಾಜನ ಶಯ್ಯಾಗಾರದ ಬಳಿಗೆ ಬಂದು, ತಾನು ಬಂದಿರುವುದಾಗಿ ಸೇವಕನಿಗೆ ತಿಳಿಸುವಂತೆ ಹೇಳಿದ.

ಸೇವಕನಿಗೆ ಬದಲಾಗಿ ಕೈಕೇಯಿ ಹೊರಗೆ ಬಂದು, "ರಾತ್ರಿಯಿಂದ ರಾಜನಿಗೆ ನಿದ್ರೆಯಿಲ್ಲ. ಇನ್ನೂ ನಿದ್ರೆಯಲ್ಲಿದ್ದಾರೆ. ನೀನು ಹೋಗಿ ರಾಮನನ್ನು ಕರೆದು ತಾ" ಎಂದು ಹೇಳಿಕಳಿಸಿದಳು.

ಸುಮಂತ್ರ ಮರುಮಾತಿಲ್ಲದೆ ಹೋಗಿ ರಾಮನನ್ನು ಕರೆದುಕೊಂಡು ಬಂದ. ಒಳಗೆ ಪ್ರವೇಶಿಸುತ್ತಿದ್ದಂತೆ, ರಾಮ ತಂದೆ ದಶರಥನಿಗೆ ಮತ್ತು ಕೈಕೇಯಿಗೆ ನಮಸ್ಕಾರ ಮಾಡಿ, ತನಗೆ ಹೇಳಿ ಕಳುಹಿಸಲು ಕಾರಣವೇನೆಂದು

ಕೇಳಿದ. ದಶರಥ ಯಾವುದೇ ಮಾತನಾಡಲಿಲ್ಲ. ರಾಮನಿಗೆ ಆಶ್ಚರ್ಯವಾಯಿತು. ತಾಯಿಯನ್ನು ವಿಚಾರಿಸಿದ. ಕೈಕೆಯಿ ನಡೆದ ಸಂಗತಿಯೆಲ್ಲವನ್ನೂ ವಿವರಿಸಿದಳು. ರಾಮನಿಗೆ ಇದರಿಂದ ಆಶ್ಚರ್ಯವೂ ಆಗಲಿಲ್ಲ; ದುಃಖವೂ ಆಗಲಿಲ್ಲ. ಬದಲಾಗಿ, 'ತಾಯಿ ಇಂಥಾ ಸಣ್ಣ ವಿಷಯಕ್ಕೆ ತಂದೆಯವರು ಇಷ್ಟೊಂದು ದುಃಖಿಸುತ್ತಿದ್ದಾರೆಯೇ? ನನ್ನ ತಂದೆಯ ಮಾತನ್ನು ಉಳಿಸಿಕೊಡಲು ನಾನೇನು ಬೇಕಾದರೂ ಮಾಡಲು ಸಿದ್ಧನಾಗಿದ್ದೇನೆ. ಭರತ ನನ್ನ ಪ್ರೀತಿಯ ತಮ್ಮ, ಅವನು ರಾಜನಾದರೆ, ನಾನೇ ರಾಜನಾದಂತೆ, ಅದಕ್ಕೇಕೆ ತಂದೆಯವರು ಇಷ್ಟೊಂದು ಚಿಂತಿಸಬೇಕು. ನೀವು ಕೋರಿದಂತೆ ಈ ಕ್ಷಣವೇ ನಾರುಮುಡಿಯುಟ್ಟು ಹದಿನಾಲ್ಕು ವರ್ಷ ವನವಾಸಕ್ಕೆ ಹೊರಡುತ್ತೇನೆ. ಇದಕ್ಕೆ ಅನುಮಾನ ಬೇಡ" ಎಂದು ಹೇಳುತ್ತಾ ತಂದೆಯ ಪಾದಸ್ಪರ್ಶ ಮಾಡಿ, ತಾಯಿಗೂ ನಮಸ್ಕರಿಸಿ ಹೊರಟು ನಿಂತ. ಹೊರಗೆ ನಿಂತಿದ್ದ ಲಕ್ಷ್ಮಣ ಎಲ್ಲವನ್ನೂ ಕೇಳಿಸಿಕೊಂಡಿದ್ದ.

ರಾಮ ಹೊರಗೆ ಬರುತ್ತಿದ್ದಂತೆ ಲಕ್ಷ್ಮಣ ಕೋಪಾವಿಷ್ಟವಾಗಿ, "ಅಣ್ಣಾ! ನೀನೇಕೆ ಸುಮ್ಮನೆ ಎಲ್ಲವನ್ನೂ ಒಪ್ಪಿಕೊಂಡು ಬಂದೆ? ದುಷ್ಟಳಾದ ತಾಯಿಯನ್ನು ಈಗಲೇ ಮುಗಿಸಿ ಬಿಡುವೆ" ಎಂದು ಹರಿಹಾಯ್ದ. ಆದರೆ ರಾಮ, ಅವನನ್ನು ಸುಮ್ಮನಾಗಿಸಿದ, ಬುದ್ಧಿವಾದ ಹೇಳಿದ.

ಶಾಂತಗೊಂಡ ಲಕ್ಷ್ಮಣ, ಅಣ್ಣನೊಡನೆ ತಾನು ಕಾಡಿಗೆ ಬರುವುದಾಗಿ ಹಠ ಹಿಡಿದ. ವಿಷಯ ಅಷ್ಟು ಹೊತ್ತಿಗೆ ಎಲ್ಲರಿಗೂ ತಿಳಿದು ಹೋಗಿತ್ತು. ಸಂಭ್ರಮದ ಸದ್ದುಗದ್ದಲ ಇರಬೇಕಾದಲ್ಲಿ ಸ್ಮಶಾನ ಮೌನ ಕವಿದಿತ್ತು. ರಾಮ ತಾಯಿ ಕೌಸಲ್ಯೆ ಬಳಿಗೆ ಹೋಗಿ ಎಲ್ಲ ವಿವರವಾಗಿ ತಿಳಿಸಿದ. ಕೌಸಲ್ಯೆಗೆ ಮಗನ 14 ವರ್ಷಗಳ ಅಗಲಿಕೆಯ ನೆನಪಿನಿಂದ ದುಃಖ ವಾಯಿತಾದರೂ ಅವನನ್ನು ತಡೆಯಲಾಗಲಿಲ್ಲ.

ಸೀತೆಯು ವಿಷಯ ತಿಳಿದದ್ದೇ ರಾಮನಿದ್ದಲ್ಲಿಗೆ ಬಂದು, "ಆರ್ಯಪುತ್ರ, ಪತಿಯ ಅನುಸರಣೆಯೇ ಸತಿಯಾದವಳ ಕರ್ತವ್ಯ. ನನಗೆ ನಡೆದದ್ದೆಲ್ಲ ತಿಳಿದಿದೆ. ನಾನೂ ನಿಮ್ಮೊಡನೆ ವನವಾಸಕ್ಕೆ ಬರುತ್ತೇನೆ" ಎಂದಳು.

"ಸೀತೆ ಕಾಡಿನ ಬದುಕು ನೀನು ತಿಳಿದಷ್ಟು ಸುಲಭವಲ್ಲ. ಹೆಜ್ಜೆ ಹೆಜ್ಜೆಗೂ ಅಪಾಯಗಳು, ಕಷ್ಟಗಳು ಅರಮನೆಯಲ್ಲಿ ಸುಖವಾಗಿ ಬೆಳೆದವಳು" ಎಂದನು. ಸೀತೆ ಬಿಡಲಿಲ್ಲ. ಅವಕಾಶಗಳು ಎದುರಾದಂತೆ ತಾನು ತನ್ನನ್ನು ಹೂವಾಗಿಸಿಕೊಳ್ಳಬಲ್ಲಳು; ಕಲ್ಲಾಗಿಸಿಕೊಳ್ಳಬಲ್ಲಳು ಎಂಬ ವಿಚಾರವನ್ನು ಮನದಟ್ಟು ಮಾಡಿ, ಅವನ ಜೊತೆಗೆ ಹೊರಟು ನಿಂತಳು.



## ವನವಾಸದೆಡೆಗೆ

ರಾಮ, ಲಕ್ಷ್ಮಣ, ಸೀತೆಯರು ನಾರುಮುಡಿಯುಟ್ಟರು. ರಾಮ, ಲಕ್ಷ್ಮಣರು ನಾರುಮಡಿಯ ಜೊತೆಗೆ ಜಟಾಧಾರಿಗಳಾಗಿ, ಕೈಯ್ಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು, ಎಲ್ಲರನ್ನೂ ಕಂಡು ಮಾತನಾಡಿಸಿ, ಅವರಿಂದ ಆಶೀರ್ವಾದ ಪಡೆದು, ತಂದೆ ತಾಯಂದಿರನ್ನು ಸಾಂತ್ವನಗೊಳಿಸಿ, ಹೊರಗೆ ಸುಮಂತ್ರ ತಂದು ನಿಲ್ಲಿಸಿದ್ದ ರಥವೇರಿದರು.

ಅಯೋಧ್ಯಾಪುರದ ಜನಸಮೂಹವೆಲ್ಲ ಅರಮನೆಯ ಮುಂದೆ ಸಮಾವೇಶಗೊಂಡು ರಾಮ, ಲಕ್ಷ್ಮಣರನ್ನು ಅರಣ್ಯಕ್ಕೆ ಹೋಗಗೊಡದೆ ಅಳುತ್ತಾ ಅಡ್ಡಗಟ್ಟಿ ನಿಂತರು. "ರಾಮನಿರುವೆಡೆಯೇ ಅಯೋಧ್ಯೆ, ರಾಮನೇ ತಮಗೆ ರಾಜ, ಆದ್ದರಿಂದ ಅವನು ಇಲ್ಲಿ ಇರಲು ಒಪ್ಪದಿದ್ದರೆ ಅವನನ್ನು ಹಿಂಬಾಲಿಸಿ ಅವನೆಡೆಗೇ ಬರುವುದಾಗಿ ಹಟ ಹಿಡಿದರು.

ಸುಮಂತ್ರನೇ ರಥವನ್ನು ನಡೆಸುತ್ತಿದ್ದನು. ರಾಮನು ಪ್ರಜೆಗಳಿಗೆ ಎಷ್ಟು ಬಗೆಯಲ್ಲಿ ಸಮಾಧಾನ ಹೇಳಿದರೂ ಕೇಳದೆ ರಥದ ಹಿಂದೆ ನಡೆದರು.

ರಥ ಮುಂದೆ ಸಾಗಿ ತಮಸಾ ನದೀ ತೀರವನ್ನು ತಲುಪಿತು. ಕತ್ತಲಾಗ ತೊಡಗಿತ್ತು. ರಾತ್ರಿಯಲ್ಲಿ ಪ್ರಯಾಣ ಮುಂದುವರೆಸುವುದು ಸರಿಯಲ್ಲವೆನಿಸಿ, ಆ ರಾತ್ರಿ ಅಲ್ಲಿಯೇ ಮರದ ಕೆಳಗೆ ವಿಶ್ರಾಂತಿ ತೆಗೆದುಕೊಳ್ಳಲು ಬಯಸಿದರು. ತಮ್ಮನ್ನು ಹಿಂಬಾಲಿಸಿ ಬಂದ ಪ್ರಜೆಗಳನ್ನು ರಾಮ ನೋಡಿದ. ಹೇಗಾದರೂ ಇವರನ್ನು ಹಿಂದಕ್ಕೆ ಕಳಿಸಬೇಕೆನ್ನಿಸಿತು. ಅದಕ್ಕಾಗಿ ತೀರಾ ಬೆಳಗಾಗುವ ಮುನ್ನವೇ ಸದ್ದಿಲ್ಲದಂತೆ ಅಲ್ಲಿಂದ ಹೊರಟು ಬಿಡಬೇಕೆಂದು ನಿರ್ಧರಿಸಿ ಸುಮಂತ್ರನನ್ನು ಇನ್ನಷ್ಟು ದಟ್ಟವಾದ ಕಾಡಿನೆಡೆಗೆ ರಥವನ್ನು ಕೊಂಡೊಯ್ಯಲು ಕೇಳಿಕೊಂಡನು.

ಸುಮಂತ್ರನು ಅಂತೆಯೇ ರಥವನ್ನು ಮುಂದಕ್ಕೆ ನಡೆಸಿದ. ಎಲ್ಲರೂ ಗಂಗಾನದೀ ತೀರವನ್ನು ತಲುಪಿದರು. ಆ ಪ್ರದೇಶ ಬಹಳ ಪ್ರಶಾಂತ ವಾಗಿತ್ತು. ಆ ರಾತ್ರಿ ಅಲ್ಲಿಯೇ ಕಳೆಯಲು ತೀರ್ಮಾನಿಸಿದರು. ಇವರಿಳಿದಿದ್ದ ಆ ಕಾಡಿನ ಪ್ರದೇಶದಲ್ಲಿಯೇ ಒಂದು ಬೆಸ್ತರ ಹಳ್ಳಿಯಿತ್ತು. 'ಗುಹ'ನೆಂಬ ಬೆಸ್ತರನಾಯಕ ಅಲ್ಲಿಯೇ ವಾಸವಾಗಿದ್ದ. ರಾಮನು ಬಂದಿರುವ ಸುದ್ದಿ ಕೇಳಿ ಅಲ್ಲಿಗೆ ಬಂದು ರಾಮನನ್ನು ಸಂತೋಷದಿಂದ ಸ್ವಾಗತಿಸಿದ. ತನಗಾದ ಸಂತೋಷವನ್ನು ಹೇಳಿಕೊಂಡ. ಅರಮನೆಯಲ್ಲಿನ ಎಲ್ಲರ ಬಗ್ಗೆ ಕುಶಲ ವಿಚಾರಿಸಿದ. ಗುಹನಿಂದ ರಾಮ, ಲಕ್ಷ್ಮಣ ಸೀತೆ, ಸುಮಂತ್ರರಿಗೆ ಒಳ್ಳೆಯ ಆದರಾತಿಥ್ಯಗಳು ಲಭಿಸಿದವು.

ರಾಮ, ಗುಹ ಮತ್ತು ಸುಮಂತ್ರರಿಂದ ಬೀಳ್ಕೊಳ್ಳಲು ಬಯಸಿ, "ಪೂಜ್ಯರೇ, ಗೆಳೆಯನೇ ದಯವಿಟ್ಟು ನಮ್ಮನ್ನು ಇಲ್ಲಿಂದ ಕಳಿಸಿಕೊಡಿ. ಇಷ್ಟು ದೂರದವರೆಗೆ ನಮ್ಮನ್ನು ಕರೆತಂದು, ಒಳ್ಳೆಯ ಅತಿಥಿ ಸತ್ಕಾರಕ್ಕೆ ಪಾತ್ರರಾಗಿದ್ದೀರಿ. ಇನ್ನು ದಯವಿಟ್ಟು ಹಿಂತಿರುಗಿ, ಪೂಜ್ಯ ಸುಮಂತ್ರರೇ ನಮ್ಮ ತಂದೆ ತಾಯಂದಿರ ರಕ್ಷಣೆಯ ಜವಾಬ್ದಾರಿಯನ್ನು ತಮಗೆ ವಹಿಸುತ್ತಿದ್ದೇನೆ. ಅವರಿಗೆ ನೋವಾಗದಂತೆ ನೋಡಿಕೊಳ್ಳಿ" ಎಂದು ಹೇಳಿ ಬೀಳ್ಕೊಂಡ.

ಸುಮಂತ್ರನಿಗೆ ದುಃಖ ಉಕ್ಕಿ ಬಂತು. ಕಂಬನಿ ತುಂಬಿದ ಕಣ್ಣುಗಳಿಂದ ಹೇಳಿದ. "ರಾಮ, ನೀನಿಲ್ಲದೆ ನಾನು ಹೋಗಿ ಹೇಗೆ ಮುಖ ತೋರಿಸಲಿ? ನಿನ್ನ ಬಗ್ಗೆ ನಿನ್ನ ತಂದೆಯವರು ವಿಚಾರಿಸಿದರೆ, ಏನೆಂದು ಹೇಳಲಿ?"

ರಾಮನಿಂದ ಸುಮಂತ್ರನ ಪ್ರಶ್ನೆಗಳಿಗೆ ಉತ್ತರವಿರಲಿಲ್ಲ. ಮತ್ತೊಮ್ಮೆ ಆತನನ್ನು ಸಮಾಧಾನ ಪಡಿಸಿ ಕಳಿಸಿಕೊಟ್ಟ.

ವಿಷಯವನ್ನೆಲ್ಲ ತಿಳಿದಿದ್ದ 'ಗುಹ' ಹದಿನಾಲ್ಕು ವರ್ಷಗಳ ವನವಾಸವನ್ನು ತನ್ನಲ್ಲಿ ಉಳಿದುಕೊಂಡು ಕಳೆಯಬೇಕೆಂದು ಪ್ರಾರ್ಥಿಸಿದ. ಆದರೆ ರಾಮ ಅದಕ್ಕೆ ಒಪ್ಪಲಿಲ್ಲ. ಹಾಗೆ ಮಾಡಿದಲ್ಲಿ ತಂದೆಯ ಮಾತಿಗೆ ದ್ರೋಹ ಬಗೆದಂತೆ ಆಗುವುದೆಂದು ತಿಳಿಸಿ, ಮೃದುವಾಗಿ ಅವನ ಪ್ರಾರ್ಥನೆಯನ್ನು ನಿರಾಕರಿಸಿದ. ಆದರೆ, ತಮ್ಮನ್ನು ಸಾಧ್ಯವಿದ್ದಲ್ಲಿ

ಗಂಗಾನದಿಯನ್ನು ದಾಟಿಸಬೇಕೆಂದು ಕೇಳಿಕೊಂಡ. 'ಗುಹ' ಸಂತೋಷದಿಂದ ಒಪ್ಪಿಕೊಂಡನಾದರೂ ಒಂದು ಷರತ್ತನ್ನು ಮುಂದಿರಿಸಿದ. ರಾಮ ದೋಣಿಯಲ್ಲಿ ಕಾಲಿರಿಸುವ ಮೊದಲು, ಅವನ ಪಾದ ತೊಳೆಯಲು ಅವಕಾಶ ಕೊಡಬೇಕು. ಏಕೆಂದರೆ ಅವನ ಪಾದಧೂಳಿಗೆ ಕಲ್ಲನ್ನಾದರೂ ಕಾಂತೆಯನ್ನಾಗಿ ಮಾರ್ಪಡಿಸುವ ಸಾಮರ್ಥ್ಯವಿರುವುದರಿಂದ, ತನ್ನ ಜೀವನೋಪಾಯಕ್ಕೆ ಇರುವ ಏಕೈಕ ಸಾಧನ 'ದೋಣಿ' ಹೆಣ್ಣಾಗಿ ಬಿಟ್ಟರೆ? ಎಂಬ ಭಯ!? ಅವನು ತಿಳಿಸಿದ ಕಾರಣ ಕೇಳಿ ನಕ್ಕು, ರಾಮ ತನ್ನ ಪಾದ ತೊಳೆಯಲು ಗುಹನಿಗೆ ಅವಕಾಶ ಕೊಟ್ಟ.

ಗುಹ ಗಂಗಾನದಿಯನ್ನು ದಾಟಿಸಿ, ಅವರಿಂದ ಬೀಳ್ಕೊಂಡ. ರಾಮ, ಲಕ್ಷ್ಮಣರು ಪವಿತ್ರ ಗಂಗಾಸ್ನಾನ, ಪೂಜೆ ಮಾಡಿ, ಮುಂದೆ ದಟ್ಟವಾದ ಕಾಡಿನ ಪ್ರದೇಶವನ್ನು ತಲುಪಿದರು. ಲಕ್ಷ್ಮಣನನ್ನು ಸೀತೆ, ರಾಮ, ಹಿಂಬಾಲಿಸಿದರು. ಸ್ವಲ್ಪ ದೂರ ಮುಂದೆ ನಡೆದು ಆಲದ ಮರವೊಂದರ ಕೆಳಗೆ ದಣಿವಾರಿಸಿಕೊಳ್ಳಲು ಕುಳಿತರು.

ಬೆಳಿಗ್ಗೆ ಎದ್ದು ನಿತ್ಯಕರ್ಮಗಳನ್ನು, ಸ್ನಾನಾದಿಗಳನ್ನು ಮುಗಿಸಿ ಭಾರಧ್ವಾಜಾಶ್ರಮದ ಕಡೆಗೆ ನಡೆದರು. ಇವರನ್ನು ಕಂಡು ಭಾರಧ್ವಾಜ ಋಷಿಗಳಿಗೆ ಅಪಾರ ಸಂತೋಷವಾಯಿತು. ಪರಸ್ಪರ ಕುಶಲೋಪರಿಯಾದ ಮೇಲೆ, ರಾಮ ತಮಗೆ ವಾಸಮಾಡಲು ಸರಿಯಾದ ಪ್ರದೇಶವೊಂದನ್ನು ಸೂಚಿಸುವಂತೆ ಭರಧ್ವಾಜ ಋಷಿಗಳನ್ನು ಪ್ರಾರ್ಥಿಸಿದ. ಭರಧ್ವಾಜರು ಚಿತ್ರಕೂಟ ಪರ್ವತ ಪ್ರದೇಶ ಅತ್ಯಂತ ಸುರಕ್ಷಿತ, ವಾಸಯೋಗ್ಯ ಸ್ಥಳವೆಂದು ತಿಳಿಸಿದರು. ಋಷಿಗಳಿಂದ ಬೀಳ್ಕೊಂಡು ಚಿತ್ರಕೂಟ ಸ್ಥಳವನ್ನು, ಅವರು ತಿಳಿಸಿದ ಗುರುತುಗಳ ಜಾಡುಹಿಡಿದು ಹುಡುಕ ತೊಡಗಿದರು. ಸುಂದರವೂ, ಭಯಂಕರವೂ ಆದ ಆ ವನಪ್ರಾಂತದಲ್ಲಿನ ನಡಿಗೆಯೇ ಅವರಿಗೆ ಅದ್ಭುತವಾದ ಅನುಭವವಾಗಿತ್ತು. ದಟ್ಟ ಹಸಿರಿನ ಮರಗಳು; ಎಲ್ಲೆಲ್ಲೂ ಬಣ್ಣ ಬಣ್ಣದ ಹೂಗಳಿಂದ ತುಂಬಿದ ಮರಗಿಡಗಳು; ಅವುಗಳಿಂದ ಹೊರಟ ಗಂಧವನ್ನು ಹೊತ್ತು ತರುತ್ತಿದ್ದ ಹಿತವಾದ ಮಂದಗಾಳಿ! ಮಧ್ಯೆ ಮಧ್ಯೆ ಸುಖವನ್ನು ಇನ್ನಷ್ಟು ಹೆಚ್ಚಿಸುತ್ತಿದ್ದ ಕೋಗಿಲೆಗಳ ಇಂಚರ;

ಹಕ್ಕಿಗಳ ಕಲರವ! ಇದಕ್ಕೆ ಹಿನ್ನೆಲೆಯೆಂಬಂತೆ ಜುಳು ಜುಳು ಹರಿವ ನದೀಗಾನ! ಸೀತೆಗೆ ಇವೆಲ್ಲವೂ ಹೆಚ್ಚಿನ ರೋಮಾಂಚನವನ್ನು ಉಂಟು ಮಾಡುತ್ತಿದ್ದವು.

ಹಸಿದಾಗ ಮರದ ಹಣ್ಣುಗಳನ್ನು ತಿನ್ನುತ್ತ, ನದಿಗಳಲ್ಲಿನ ಮಧುರವಾದ ನೀರನ್ನು ಕುಡಿಯುತ್ತಾ ಯಾವ ಚಿಂತೆಯೂ ಇಲ್ಲದೆ ಅರಮನೆಗಿಂತ ಹೆಚ್ಚಿನ ಸುಖವನ್ನು ಅನುಭವಿಸುತ್ತಿದ್ದರು. ಈ ಸ್ಥಿತಿಯಲ್ಲಿ ಅವರು ನಡೆದ ದೂರದ ಕಲ್ಪನೆಯೇ ಇರಲಿಲ್ಲ. ಅಕಸ್ಮಾತ್ತಾಗಿ ಲಕ್ಷ್ಮಣನಿಗೆ ಚಿತ್ರಕೂಟ ಪರ್ವತ ಕಾಣಿಸಿತು. ಅಣ್ಣನಿಗೆ ದೂರದಲ್ಲಿದ್ದ ಅದನ್ನು ತೋರಿಸಿದ. "ಓಹ್ ಎಷ್ಟು ಅದ್ಭುತ ಚೆಲುವಿನ ಪ್ರದೇಶವಾಗಿದೆ!" ಎಂದು ಒಟ್ಟಿಗೆ ಎಲ್ಲರೂ ಉದ್ಗರಿಸಿದರು. ಚೆಲುವಾದ ಪ್ರದೇಶವಾಗಿರುವುದರ ಜೊತೆಗೆ ಆ ಪರಿಸರದಲ್ಲಿ ಕಾಣುತ್ತಿದ್ದ ಹಲವಾರು ಆಶ್ರಮಗಳು ಅವರ ಸಂತೋಷಕ್ಕೆ ಕಾರಣವಾಗಿತ್ತು. ಅಂತೂ ಇಂತೂ ಚಿತ್ರಕೂಟವನ್ನು ತಲುಪಿದರು.

ಲಕ್ಷ್ಮಣ ತಮ್ಮ ವಾಸಕ್ಕೆ ಯೋಗ್ಯವಾದ ಬಲಿಷ್ಠವಾದ ಕಲಾತ್ಮಕವಾದ ಕುಟೀರ (ಗುಡಿಸಲು)ವೊಂದನ್ನು ನಿರ್ಮಿಸಿದನು. ತಮ್ಮನ ಕರಕುಶಲತೆಯನ್ನು ಕಂಡು ರಾಮ ಬೆರಗಾದ. ರಾಜಕುಮಾರನಾದ ಲಕ್ಷ್ಮಣನಿಗೆ ಈ ಕಲೆ ಹೇಗೆ, ಎಲ್ಲಿ, ಯಾವಾಗ ಸಾಧ್ಯವಾಯಿತೆಂದು ಅಚ್ಚರಿಯಿಂದ ತನ್ನೊಳಗೇ ಪ್ರಶ್ನಿಸಿಕೊಂಡ.

ಮೂವರೂ ಆ ಕುಟೀರದಲ್ಲಿ ಯಾವುದೇ ತೊಂದರೆ, ಸಮಸ್ಯೆಗಳಿಲ್ಲದೆ ಜೀವಿಸತೊಡಗಿದರು. ಕಾಡಿನ ಹಣ್ಣು, ಹಂಪಲು, ಬೇರುಗಳಿಂದ ಆಹಾರ ಸಮಸ್ಯೆ ಇಲ್ಲವಾಗಿತ್ತು. ಅಲ್ಲಲ್ಲಿ ಹರಿವ ಶುದ್ಧ ನೀರಿನ ಹೊಳೆ, ನದಿಗಳು ಸಮೃದ್ಧವಾದ ನೀರನ್ನು ಒದಗಿಸುತ್ತಿದ್ದವು. ಪುಣ್ಯಕಥಾ ಶ್ರವಣ, ಚಿಂತನ, ಅಧ್ಯಯನ, ಅನುಸಂಧಾನ, ಚರ್ಚೆಗೆ ಸಾಕಷ್ಟು ಸಂಖ್ಯೆಯಲ್ಲಿ ಋಷಿ ಮುನಿಗಳಿದ್ದರು. ವನವಾಸದಲ್ಲಿ ಅಂತಹ ವಾತಾವರಣದಲ್ಲಿ ಕಳೆಯುವುದು ರಾಮನಿಗೆ ಕಷ್ಟವೆನಿಸಲಿಲ್ಲ.



## ದಶರಥನ ಸಾವು – ಭರತನ ಆಗಮನ

ರಾಮ, ಲಕ್ಷ್ಮಣ, ಸೀತೆ ಮೂವರನ್ನೂ ಬೀಳ್ಕೊಟ್ಟು ಹಿಂತಿರುಗಿದ ಸುಮಂತ್ರನ ದುಃಖಕ್ಕೆ ಕೊನೆಯಿಲ್ಲದಂತಾಯಿತು, ಬಂದ ಕೂಡಲೇ ದಶರಥ ಮಹಾರಾಜರನ್ನು ಕಾಣಬೇಕೆಂಬ ತವಕವಿದ್ದರೂ ಮಕ್ಕಳ ವಿಚಾರವಾಗಿ ಕೇಳುವ ಪ್ರಶ್ನೆಗಳಿಗೆ ಉತ್ತರಿಸಲಾಗದ ಸ್ಥಿತಿಯನ್ನು ನೆನೆದಾಗ ಭಯವಾಯಿತು.

ಬರುವಾಗ ಅಯೋಧ್ಯೆಯ ಬೀದಿಗಳು ಕಣ್ಣಿಗೆ ಬಿದ್ದಾಗ ಸಂಕಟವಾಯಿತು. ಸಾವಿನ ಶೋಕದ ಛಾಯೆ ಕವಿದು ನಿರ್ಜೀವವಾಗಿ ಬಿದ್ದಂತೆನಿಸಿತು. ರಾಜ್ಯಾಭಿಷೇಕದ ಸಂತೋಷ, ಸಂಭ್ರಮಗಳಿಂದ ತುಂಬಿ ಕಂಗೊಳಿಸಬೇಕಿದ್ದ ಆ ನಗರದ ಸ್ಥಿತಿ ಕಂಡಾಗ ಮನಸ್ಸು ಕುದಿಯಿತು. ಆತ್ಮವನ್ನೇ ಕಳೆದುಕೊಂಡ ಶರೀರದಂತಿತ್ತು.

ಅರಮನೆಗೆ ಬಂದವನೇ ನೇರವಾಗಿ ದಶರಥನ ಕೋಣೆಯನ್ನು ಪ್ರವೇಶಿಸಿದ. ದಶರಥ ಒಂದು ಜೀವಂತ ಶವದಂತೆ ಬಿದ್ದುಕೊಂಡಿದ್ದ. 'ಮಲಿನವಾದ ವಸ್ತ್ರಗಳು, ಬೇಸತ್ತ ಮುಖ, ಶೂನ್ಯ ನೋಟ, ಒಂದಿಷ್ಟಾದರೂ ಚಲನವಿಲ್ಲ. ರಾಜನನ್ನು ಆ ಸ್ಥಿತಿಯಲ್ಲಿ ನೋಡಿದ ಸುಮಂತ್ರನಿಗೆ ಹೇಗೆ ಮಾತನಾಡಿಸಬೇಕೆಂಬುದೇ ತಿಳಿಯಲಿಲ್ಲ. ಆದರೂ ರಾಜನನ್ನು ಸಮೀಪಿಸಿ "ಮಹಾರಾಜ, ರಾಮ, ಲಕ್ಷ್ಮಣ, ಸೀತೆಯರು ಕ್ಷೇಮವಾಗಿದ್ದಾರೆ. ತಮಗೆ ನಮಸ್ಕಾರಗಳನ್ನು ತಿಳಿಸಲು ಹೇಳಿದ್ದಾರೆ. ಆದಷ್ಟು ಬೇಗ ಹದಿನಾಲ್ಕು ವರ್ಷಗಳ ವನವಾಸ ಮುಗಿಸಿ ಹಿಂತಿರುಗುವುದಾಗಿಯೂ, ತಮ್ಮ ಬಗ್ಗೆ ಚಿಂತೆ ಬೇಡವೆಂದೂ ತಿಳಿಸಿದ್ದಾರೆ" ಎಂದು ನುಡಿದನು.

ದಶರಥನು ಮಲಗಿದ್ದ ಹಾಸಿಗೆಯ ಪಕ್ಕದಲ್ಲಿಯೇ ಕೌಸಲ್ಯೆ ಕುಳಿತಿದ್ದಳು. ಆದರೆ ದುಃಖ, ದುಗುಡ, ಕ್ರೋಧದಿಂದ ಗಂಡನನ್ನು ಕಟುವಾಗಿ

ದೂರುತ್ತಲೇ ಇದ್ದಳು. ಕೈಕೇಯಿಯ ಮೇಲಿನ ಪ್ರೀತಿಯೇ ಇದಕ್ಕೆಲ್ಲ ಕಾರಣ. ಭರತನಿಗೆ ಸಿಂಹಾಸನ ಕೊಡಿಸುವ ದುರುದ್ದೇಶದಿಂದ ಉಪಾಯಾಂತರದಿಂದ ರಾಮನನ್ನು ವನವಾಸಕ್ಕೆ ಸಾಗಹಾಕಿದ್ದಾಳೆ ಎಂಬುದು ಅವಳ ನಂಬಿಕೆಯಾಗಿತ್ತು. ತಾನೂ ತನ್ನ ಮಗನಂತೆ ಕಾಡಿಗೆ ಹೋಗುವುದಾಗಿ ಬೆದರಿಕೆ ಹಾಕಿದಳು.

ಅವಳ ಕೋಪ, ತಾಪ, ದೂರು ದುಮ್ಮಾನಗಳಿಗೆ ಅರ್ಥವಿದೆ ಎಂದು ಸಮಾಧಾನ ತಂದುಕೊಂಡ ದಶರಥ ಅವಳನ್ನು ಎಷ್ಟೋ ಪರಿಯಲ್ಲಿ ಸಂತೈಸಿದ. ತನ್ನ ಮನಸ್ಸಿನ ನಿಜವಾದ ಬಯಕೆ ಏನೆಂಬುದನ್ನೂ, ಇಂತಹ ಪರಿಸ್ಥಿತಿಗೆ ತಾನು ಹೊಣೆಯಲ್ಲವೆಂದೂ ತಿಳಿಸಿದ. ಅಲ್ಲದೆ ತನ್ನ ಮೇಲಿದ್ದ 'ಶಾಪ'ವನ್ನು ವಿವರಿಸಿ ತಿಳಿಸಿದ.

"ಪ್ರಿಯ ಕೌಸಲ್ಯ, ನಿನ್ನ ಕಣ್ಣಲ್ಲಿ ನಾನು ತಪ್ಪಿತಸ್ಥನಾಗಿ ಕಾಣಿಸಿದರೆ ಅದಕ್ಕೆ ಅರ್ಥವಿದೆ. ಆದರೆ ನಿಜವಾಗಿ ಹೇಳುವುದಾದರೆ ಇದೆಲ್ಲವೂ ವಿಧಿಯಿಂದಾದುದು. ನನಗೆ ಬಂದ ಶಾಪದ ಸಂದರ್ಭವನ್ನು ಕೇಳು. ಇಲ್ಲಿಯವರೆಗೆ ಅದನ್ನು ನಿಮ್ಮಿಂದ ಮರೆಮಾಚಿದ್ದೆ. ಕಾರಣ ನೀವು ತಲ್ಲಣಗೊಳ್ಳುತ್ತೀರಿ ಎಂದು, ಆದರೆ ಈಗ ವಿವರಿಸುತ್ತೇನೆ.

"…. ಒಮ್ಮೆ ನಾನು ಬೇಟೆಗೆಂದು ಹೋಗಿದ್ದಾಗ, ದೂರದಲ್ಲಿ ಏನೋ ಶಬ್ದವಾಯಿತು. ಕಿವಿಗೊಟ್ಟು ಆಲಿಸಿದೆ. ಆನೆ ನೀರು ಕುಡಿಯುತ್ತಿರುವ ಶಬ್ದವೆಂದು ಭಾವಿಸಿ ಶಬ್ದವೇಧಿಯ ಮೂಲಕ ಆ ಪ್ರಾಣಿಗೆ ಗುರಿಯಿಟ್ಟು ಹೊಡೆದೆ. ಮರುಕ್ಷಣದಲ್ಲಿ ಒಮ್ಮೆಲೇ ಮನುಷ್ಯನ ಚೀರುವಿಕೆಯಂತೆ ಕೇಳಿಸಿತು. ಭಯಭೀತನಾಗಿ ಆ ಜಾಗಕ್ಕೆ ಹೋದೆ. ಮುನಿಕುಮಾರನೊಬ್ಬನು ಮರಣಾವಸ್ಥೆಯಲ್ಲಿದ್ದನು. ಅವನು ಕೊಡದಲ್ಲಿ ನೀರು ತುಂಬಿಕೊಳ್ಳಲು ಯತ್ನಿಸಿದಾಗ ಕೊಡ ತುಂಬುವ ಸದ್ದು ನನಗೆ ಆನೆ ನೀರು ಕುಡಿಯುವ ಸದ್ದಿನಂತೆ ಭಾಸವಾಗಿ ಮೋಸಹೋದೆ. ಅವನು ಶ್ರವಣ ಕುಮಾರ. ಕಣ್ಣಿಲ್ಲದ ತಂದೆ ತಾಯಿಯರ ಏಕಮಾತ್ರ ಆಧಾರವಾಗಿದ್ದ ಅವನ ಸಾವಿಗೆ ಕಾರಣನಾದ ನನ್ನನ್ನು ಅವನ ತಂದೆ ತಾಯಿಗಳು ಶಪಿಸಿದರು. ನಿನ್ನ ಮಕ್ಕಳು ಯಾರೂ ನಿನ್ನ ಬಳಿಯಲ್ಲಿ ಇಲ್ಲದಿದ್ದಾಗ ನೀನು ನಮ್ಮಂತೆ

ಸಾಯುವೆ ಎಂದರು. ಕೌಸಲ್ಯ ಈಗ ನನ್ನ ಸಾವು ಸಮೀಪಿಸಿದೆ. ನಿನ್ನ ಮಗನಿಗೆ ಮಾಡಿದ ಅನ್ಯಾಯಕ್ಕೆ ಈ ಶಿಕ್ಷೆ ಸಾಲದೆ? ದಯವಿಟ್ಟು ನನ್ನನ್ನು ಕ್ಷಮಿಸಿ" ಎಂದು ಅಂಗಲಾಚಿ ಬೇಡಿಕೊಂಡಿದ್ದನು. ಇದನ್ನು ಕೇಳಿದ ಮೇಲೆ ಕೌಸಲ್ಯೆ ಸಮಾಧಾನ ತಂದುಕೊಂಡಳಾದರೂ, ಗಂಡನ ಸಾವಿಗೆ ಹೆದರಿದಳು. ಅವನ ದೈನ್ಯ ಸ್ಥಿತಿಗೆ ಮರುಗಿ ಬಿಕ್ಕಿ ಬಿಕ್ಕಿ ಅತ್ತಳು.

ಕೌಸಲ್ಯೆಯ ಜೊತೆಗೆ ಸುಮಿತ್ರೆಯೂ ಇದ್ದಳು. ಇಷ್ಟು ಹೊತ್ತು ಮಾತನಾಡಿದ್ದಕ್ಕಾಗಿ ಆಯಾಸವೆನಿಸಿ ಮೆಲ್ಲಗೆ ಕಣ್ಣುಮುಚ್ಚಿದ. ರಾಣಿಯರಿಬ್ಬರೂ ಹಾಗೆಯೇ ನಿದ್ರೆಗಿಳಿದರು. ರಾತ್ರಿ ಕಳೆಯಿತು.

ಬೆಳಗಾಗುತ್ತಿದ್ದಂತೆ ಜನರು, ಅರಮನೆಯವರು ಅರಸನನ್ನು ಎಬ್ಬಿಸಲು ಬಂದರು. ಸುಪ್ರಭಾತವನ್ನು, ಸಂಪ್ರದಾಯದಂತೆ ಹಾಡಿದರು. ಎಷ್ಟು ಹೊತ್ತಾದರೂ ದಶರಥ ಎಚ್ಚರಗೊಳ್ಳದಿದ್ದುದನ್ನು ಗಮನಿಸಿ, ಅವರಲ್ಲಿ ಒಂದಿಬ್ಬರು ಧೈರ್ಯ ಮಾಡಿ ಒಳಗೆ ಹೋದರು.

ಮಹಾರಾಜ ಕೊನೆಯುಸಿರೆಳೆದಿದ್ದ. ರಾಣಿಯರು ನಿಶ್ಚಲರಾಗಿ ನಿಂತಿದ್ದರು. ಕೆಲ ನಿಮಿಷಗಳ ತರುವಾಯ ಪ್ರಜ್ಞಾಸ್ಥಿತಿಗೆ ಬಂದು ನಡೆದದ್ದನ್ನೆಲ್ಲ ನೆನಪಿಸಿಕೊಂಡರು. ಅರಸನನ್ನು ದೂರಿದ್ದಕ್ಕಾಗಿ ತಮ್ಮನ್ನು ಹಳಿದುಕೊಂಡರು. ಕ್ಷಮಿಸುವಂತೆ ಮತ್ತೆ ಮತ್ತೆ ಬೇಡುತ್ತ ಅವನ ದೇಹದ ಮೇಲೆ ಬಿದ್ದು ಗೋಳಾಡಿದರು.

ದಶರಥ ಮಹಾರಾಜನ ಸಾವಿನ ಸುದ್ದಿ ಕಾಳ್ಗಿಚ್ಚಿನಂತೆ ವ್ಯಾಪಿಸಿತು. ಜನ ತಂಡೋಪತಂಡವಾಗಿ ಬಂದರು. ರಾಜನ ಕಳೇಬರಕ್ಕೆ ಗೌರವ ಸಲ್ಲಿಸಿ ಅಂತಿಮದರ್ಶನ ಪಡೆದರು. ಸುಮಂತ್ರ, ಮಂತ್ರಿಗಳು, ವಸಿಷ್ಠ ವಾಮದೇವಾದಿಗಳು, ಅರಸನ ಅಂತಿಮ ಸಂಸ್ಕಾರದ ಬಗ್ಗೆ ಚಿಂತಿಸಿದರು. ಹಿರಿಯ ಮಗ ರಾಮನಿಲ್ಲ, ಲಕ್ಷ್ಮಣನೂ ಇಲ್ಲ. ಇನ್ನು ಉಳಿದ ಭರತನೇ ಇದನ್ನೆಲ್ಲ ಮಾಡಬೇಕಾಗಿರುವುದರಿಂದ, ಭರತನಿಗೆ ಆದಷ್ಟು ಬೇಗ ಹಿಂತಿರುಗಿ ಬರಬೇಕೆಂದು ಸಂದೇಶ ಕಳಿಸಿದರು. ಅದೇ ಸಮಯಕ್ಕೆ ಭರತನಿಗೆ ಏನೇನೋ ಅನಿಷ್ಟ ಕನಸುಗಳು ಬಿದ್ದವು. ಮನಸ್ಸಿನಲ್ಲಿ ಯಾವುದೋ ಭೀತಿ, ಆತಂಕ. ಆದಷ್ಟು ಬೇಗ ತಾತನ ಮನೆಯಿಂದ

ಹೊರಡಬೇಕೆಂದು ಆಲೋಚಿಸುತ್ತಿದ್ದವನಿಗೆ ಸಂದೇಶದ ಮೂಲಕ ಬೇಗ ಬರುವಂತೆ ಸೂಚಿಸಿದ್ದು ಭೀತಿಗೆ ಇನ್ನಷ್ಟು ಕಾರಣವಾಯಿತು.

ಕೂಡಲೇ ತನ್ನ ತಮ್ಮನಾದ ಶತ್ರುಘ್ನನ ಜೊತೆಗೂಡಿ ಅಯೋಧ್ಯೆಗೆ ಹೊರಟುಬಿಟ್ಟ. ಆದಷ್ಟು ಬೇಗ ತಲುಪಬೇಕೆಂಬ ತವಕದಿಂದ ರಥವನ್ನು ವೇಗವಾಗಿ ಓಡಿಸಿಕೊಂಡು ಬಂದ.

ಅಯೋಧ್ಯೆ ಸಮೀಪಿಸುತ್ತಿದ್ದಂತೆ, ಯಾಕೋ ಎಲ್ಲಿಯೂ ಗೆಲುವು ಕಾಣಲಿಲ್ಲ. ಶೂನ್ಯವಾದ ರಸ್ತೆಗಳು, ಅಪರೂಪಕ್ಕೆ ಕಾಣಿಸುತ್ತಿದ್ದ ನಿಸ್ತೇಜ ಮುಖಗಳು! ಏಕೆಂದು ತಿಳಿಯದಾದ. ಅರಮನೆ ತಲುಪಿದ್ದೇ ತಂದೆಯವರಿಗಾಗಿ ಹುಡುಕಾಡಿದ, ಎಲ್ಲಿಯೂ ಕಾಣಲಿಲ್ಲ. ಒಬ್ಬೊಬ್ಬರಾಗಿ ತಾಯಂದಿರನ್ನು ಭೇಟಿಯಾದ. ಅವರ ಮುಖಗಳಲ್ಲಿ ದುಃಖದ ಛಾಯೆ ತುಂಬಿತ್ತು. ಸೋದರರರೂ ಕಣ್ಣಿಗೆ ಬೀಳಲಿಲ್ಲ. ಅವನಿಗೆ ಎಲ್ಲವೂ ವಿಚಿತ್ರವೆನಿಸಿತು. ಕೂಡಲೇ ತನ್ನ ತಾಯಿ ಕೈಕೇಯಿಯ ಕೊಠಡಿಯನ್ನು ಪ್ರವೇಶಿಸಿದ. ಮಂಚದ ಮೇಲೆ ಮುಖ ಕೆಳಗೆ ಹಾಕಿಚಿಂತೆಯಲ್ಲಿ ಮುಳುಗಿ ಕುಳಿತಿದ್ದಳು. ಭರತ ಹೋದದ್ದೇ 'ಅಮ್ಮ' ಎಂದು ಕರೆದ. ಕೈಕೇಯಿ ಬೆಚ್ಚಿ ಮುಖ ಎತ್ತಿ ನೋಡಿದಳು. ಅವಳ ಸಂತೋಷಕ್ಕೆ ಪಾರವೇ ಇರಲಿಲ್ಲ.

ಭರತ ತಾಯಿಯನ್ನು ಪ್ರಶ್ನಿಸಿದ, 'ಅಮ್ಮ, ಯಾಕೆ ಯಾರೂ ಕಾಣಿಸುತ್ತಿಲ್ಲ. ಸದ್ದುಗದ್ದಲವಿಲ್ಲ. ಅಣ್ಣ ರಾಮ, ಲಕ್ಷ್ಮಣರು ಎಲ್ಲಿ ಹೋದರು? ಅತ್ತಿಗೆಯೆಲ್ಲಿ?' ಎಂದು ಒಂದೇ ಸಮನೆ ಪ್ರಶ್ನೆಗಳನ್ನು ಕೇಳಿದ. ಕೈಕೇಯಿ ಕೂಡಲೇ ಉತ್ತರಿಸಲಿಲ್ಲ. ಸ್ವಲ್ಪ ಸಮಯದ ಬಳಿ ಮೌನ ಮುರಿದು ಹೇಳಿದಳು. "ಮಗು ಸ್ವಲ್ಪ ಸಮಾಧಾನವಾಗಿರು ಈಗ ತಾನೇ ಬಂದಿರುವಿ, ನಂತರ ಎಲ್ಲವನ್ನೂ ವಿವರಿಸುತ್ತೇನೆ."

ಭರತನಿಗೆ ತಾಳ್ಮೆಯಿರಲಿಲ್ಲ. ಒತ್ತಾಯ ಮಾಡಿದ. ಕೈಕೇಯಿ ದಶರಥನ ಗುಣಗಾನ ಮಾಡತೊಡಗಿದಳು. ಅವನ ಶೌರ್ಯ, ಸಾಹಸ ಸತ್ಯ ಸಂಧತೆಗಳನ್ನು ವರ್ಣಿಸಿದ ನಂತರ, ಅವನ ಸಾವಿನ ಸುದ್ದಿಯನ್ನು ಹೇಳಿದಳು. ಭರತನಿಗೆ ತಂದೆಯ ಸಾವು ಇಷ್ಟು ಆಕಸ್ಮಿಕವಾಗಲು ಏನು ಕಾರಣವೆಂದು ಆಶ್ಚರ್ಯಪಟ್ಟ, ಅನುಮಾನಿಸುತ್ತಲೇ ಏನೋ ನಡೆದಿರ

ಬೇಕೆಂದು ಊಹಿಸಿ, ತಾಯಿಯನ್ನು, ನಡೆದ ಸತ್ಯವನ್ನು ತಿಳಿಸುವಂತೆ ಕಾಡಿದ. ಕೈಕೇಯಿ ಮೊದಲಿನಿಂದ ಕಡತನಕ (ದಶರಥನ ಸಾವಿನ ತನಕ) ನಡೆದದ್ದನ್ನು ವಿವರಿಸಿದಳು. ಭರತ ಅದನ್ನೆಲ್ಲ ಕೇಳಿ ಕೋಪಾವಿಷ್ಟನಾದ. ತಾಯಿಯ ಕ್ರೌರ್ಯವನ್ನು ಕಂಡು ಅಬ್ಬರಿಸಿದ ಬೈದ. ದೇವರಂಥ ಅಣ್ಣಂದಿರನ್ನು ತಾಯಿಯ ವಾತ್ಸಲ್ಯವನ್ನು ತೋರುತ್ತಿದ್ದ ಅತ್ತಿಗೆಯನ್ನು ಕಾಡಿಗಟ್ಟಿದ ಕೈಕೇಯನ್ನು ಹೀನಾಮಾನವಾಗಿ ಬೈದು ಅವಳ ಮುಖ ನೋಡಲು ಹೇಸಿ ಅಲ್ಲಿಂದ ಹೊರಟು ಬಿಟ್ಟ.

ಅಷ್ಟರಲ್ಲಿ ವಸಿಷ್ಠ, ವಾಮದೇವರು ಭರತನು ಬಂದ ಸುದ್ಧಿಯನ್ನು ತಿಳಿದು ಅವನನ್ನು ಕಾಣಲು ಬಂದರು. ಕಂಡು ಮಾತಾಡಿಸಿ, ವಿಷಯ ತಿಳಿಸಿ ಆದಷ್ಟು ಬೇಗ ಮಹಾರಾಜನ ಅಂತ್ಯ ಸಂಸ್ಕಾರ ಮಾಡಬೇಕೆಂದು ಸೂಚಿಸಿದರು.

ಭರತನು ಅತೀವ ದುಃಖದಿಂದ, ಊರ ಜನರ, ಬಂಧುಬಾಂಧವರ ಗೋಳಿನ ನಡುವೆ ಮಹಾರಾಜನ ದೇಹವನ್ನು ಚಂದನ ಕಟ್ಟಿಗೆಗಳಿಂದ ಮಾಡಿದ ಚಿತೆಯ ಮೇಲೆ ಮಲಗಿಸಿ ಅಗ್ನಿ ಸ್ಪರ್ಶವನ್ನು ಕೊಟ್ಟ. ವಿಧಿವತ್ತಾಗಿ ಪ್ರೇತ ಕರ್ಮಗಳನ್ನು ಮುಗಿಸಿ ಸೂತಕ ಸ್ನಾನ ಮಾಡಿ ಮರಳಿದ.

ಭರತನಿಗೆ ಜೀವನದಲ್ಲಿ ಆಸಕ್ತಿ ಉಳಿಯಲಿಲ್ಲ. ಯಾವುದೂ ಬೇಡವಾಯಿತು. ಆದಷ್ಟು ಬೇಗ ರಾಮನಿರುವೆಡೆಗೆ ಹೋಗಿ, ಹೇಗಾದರೂ ಅವನನ್ನು ಕರೆತಂದು ರಾಜ್ಯವನ್ನು ಒಪ್ಪಿಸಬೇಕೆಂದುಕೊಂಡ. ಆದ್ದರಿಂದಲೇ ಕುಲಗುರುಗಳು, ಮಂತ್ರಿಗಳು, ಪ್ರಜಾಪ್ರತಿನಿಧಿಗಳು, ಆದಷ್ಟು ಬೇಗ ರಾಜ್ಯಭಾರ ವಹಿಸಿಕೊಳ್ಳಬೇಕೆಂದು ಒತ್ತಾಯ ಮಾಡಿದರೂ ಕೇಳಿಸಿಕೊಳ್ಳಲಿಲ್ಲ.

ರಾಜನಿಲ್ಲದ ರಾಜ್ಯ ಸುರಕ್ಷಿತವಿಲ್ಲವೆಂದು ಹೇಳಿದರೂ ಒಪ್ಪಿಕೊಳ್ಳಲಿಲ್ಲ. ಅಣ್ಣನನ್ನು ಕಂಡು ಕ್ಷಮೆ ಪಡೆಯದ ಹೊರತು ಅವನಿಗೆ ನೆಮ್ಮದಿ ಸಾಧ್ಯವಿರಲಿಲ್ಲ. ಎಲ್ಲರಿಗೂ ಅವನು ಕೈಮುಗಿದು, "ಈ ರಾಜ್ಯ ರಾಜಸಿಂಹಾಸನ, ಮಕುಟಗಳು, ಪ್ರಜೆಗಳು, ನನ್ನ ಪ್ರಿಯ ಅಣ್ಣ ರಾಮನದು. ಅವುಗಳ ಮೇಲೆ ನನಗೆ ಎಳ್ಳಿನಷ್ಟೂ ಅಧಿಕಾರವೂ ಇಲ್ಲ. ನಾವೇನಿದ್ದರೂ

ಅವನ ಆಜ್ಞಾನುವರ್ತಿಗಳು. ಆದ್ದರಿಂದ ನಾನು ಅಣ್ಣನಿರುವಲ್ಲಿಗೆ ಹೋಗಿ, ಪ್ರಾರ್ಥಿಸಿ, ಅವನನ್ನು ಕರೆದು ತರುತ್ತೇನೆ. ಇದೆಲ್ಲವನ್ನೂ ಅವನಿಗೆ ಒಪ್ಪಿಸಿ ಬಿಡುತ್ತೇನೆ" ಎಂದು ದೈನ್ಯವಾಗಿ ನುಡಿದ.

ಭರತನ ಸೋದರ ಪ್ರೇಮ, ತ್ಯಾಗ, ನಿಸ್ವಾರ್ಥತೆ ನಿರ್ಮೋಹ ಮೊದಲಾದವುಗಳನ್ನು, ಕಂಡು ನೆರೆದಿದ್ದವರೆಲ್ಲ ಮೆಚ್ಚಿಕೊಂಡರು. ಅವನನ್ನು ರಾಜರ್ಷಿ ಎಂದು ಕೊಂಡಾಡಿದರು.

ಭರತ, ಅಣ್ಣನನ್ನು ಕಾಣಲು ಕಾಡಿಗೆ ಹೋಗುವ ಅಭಿಲಾಷೆಯನ್ನು ವ್ಯಕ್ತಪಡಿಸಿದ; ಹಾಗೆಯೇ ತಾನು ಇಲ್ಲದಿರುವಾಗ, ತನ್ನ ತಾಯಿಯಿಂದ ಆದ ಅನಾಹುತಗಳಿಗೆ ಕ್ಷಮೆ ಕೋರಿದ. ವಸಿಷ್ಠ, ವಾಮದೇವಾದಿಗಳು ಅವನ ಉದ್ದೇಶವನ್ನು ಮೆಚ್ಚಿಕೊಂಡು ತಲೆದೂಗಿದರು. ಹಾಗೆಯೇ ತಾವೂ ಅವನೊಂದಿಗೆ ರಾಮನನ್ನು ಕಾಣಲು ಬರುವುದಾಗಿ ಹೇಳಿದರು. ಅವರೊಂದಿಗೆ ಇನ್ನೂ ಅನೇಕ ಮಂದಿ, ಪುರಜನ, ಪರಿಜನ ಎಲ್ಲರೂ ಬರಲು ಮುಂದಾದರು.



## ಸೋದರರ ಭೇಟಿ

ಪ್ರಯಾಣಕ್ಕೆ ಭರ್ಜರಿ ಸಿದ್ಧತೆಗಳು ನಡೆದವು. ವಸಿಷ್ಠ, ವಾಮದೇವ, ಸುಮಂತ್ರಾದಿ ಮಂತ್ರಿಗಳು, ತಾಯಂದಿರು, ಬಂಧುಗಳು, ಕೆಲ ಪುರಜನರು, ಸೈನಿಕರು ಮೊದಲಾದವರೊಂದಿಗೆ ಭರತ ಪ್ರಯಾಣ ಹೊರಟ.

ದಟ್ಟವಾದ ಕಾಡುಗಳ ಹಾದಿಗಳನ್ನು ಸವೆಸುತ್ತ ಸಾಗಿ. ಗಂಗಾನದಿಯ ದಡದಲ್ಲಿ ಬೀಡುಬಿಟ್ಟರು. ಇನ್ನೊಂದು ದಡದಾಚೆಗೆ ವಾಸಿಸುತ್ತಿದ್ದ 'ಗುಹ' ದೂರದಿಂದಲೇ ಎಲ್ಲವನ್ನೂ ಗಮನಿಸಿದ. ಕಣ್ಣಿಟ್ಟು ನೋಡಿದಾಗ, ಸೈನ್ಯದ ಮುಂಚೂಣಿಯಲ್ಲಿ ನಿಂತಿದ್ದ ವ್ಯಕ್ತಿಯನ್ನು ರಾಜಕುಮಾರ ಭರತನೆಂದು ಕೂಡಲೇ ಗುರುತಿಸಿದ. ಆದರೆ ಭರತ ಸೈನ್ಯವನ್ನೇಕೆ ತಂದಿದ್ದಾನೆ ಎಂಬುದು ಅರ್ಥವಾಗಲಿಲ್ಲ. ಬಹುಶಃ ರಾಮನ ಮೇಲೆ ಯುದ್ಧ ಸಾರಲು ಬಂದಿರುವನೇನೋ ಎಂಬ ಅನುಮಾನ ಬಂದು, ತನ್ನವರನ್ನೆಲ್ಲ ಕರೆದು ದೋಣಿಗಳೊಂದಿಗೆ ಸಿದ್ಧವಾಗಿರಲು ಆದೇಶಿಸಿದ. ಅಗತ್ಯ ಬಿದ್ದರೆ, ಯುದ್ಧವನ್ನು ಎದುರಿಸಲು ಸಾದ್ಯವಾಗಲಿ ಎಂಬುದು ಅವನ ಉದ್ದೇಶವಾಗಿತ್ತು.

ಗುಹ ತಾನೇ ಭರತನನ್ನು ಕಂಡು ವಿಷಯ ಏನೆಂದು ತಿಳಿಯಲು ಬಯಸಿ ಬಂದಿದ್ದ. ಅಷ್ಟು ಹೊತ್ತಿಗೆ ಭರತ ತನ್ನ ನಿತ್ಯ ಕರ್ಮಗಳನ್ನು ಮುಗಿಸಿದ್ದ. ಸುಮಂತ್ರ ಗುಹನು ಬಂದ ಕಾರಣವನ್ನು ಕೂಡಲೇ ಊಹಿಸಿದ. ಭರತನಿಗೆ ಗುಹನ ಪರಿಚಯ ಮಾಡಿಸಿ, ರಾಮನಿಗೆ ತುಂಬ ಆಪ್ತಮಿತ್ರನೆಂದು ವಿವರಿಸಿದ. ಇದರಿಂದ ಭರತನಿಗೆ ಸಂತೋಷವಾಯಿತು. ಭರತ ತನ್ನ ಪರಿಚಯ, ತಾನು ಬಂದ ಕಾರಣ ಎಲ್ಲವನ್ನು ವಿವರಿಸಿ, ತನ್ನಣ್ಣ ರಾಮನನ್ನು ಕಾಣಲು ಸಹಕರಿಸಬೇಕೆಂದು ಕೇಳಿಕೊಂಡ. ಭರತನ ನಿಜವಾದ ಉದ್ದೇಶ ತಿಳಿದ ಗುಹ, ಭರತನನ್ನು ತಪ್ಪಾಗಿ ತಿಳಿದದ್ದಕ್ಕೆ ಪಶ್ಚಾತ್ತಾಪ ಪಟ್ಟು ತುಂಬಾ ಭಾವುಕನಾದ.

ರಾಮ, ಲಕ್ಷ್ಮಣ ಸೀತೆಯರು ಭರಧ್ವಾಜಾಶ್ರಮದ ಕಡೆ ಹೋದ ವಿಷಯವನ್ನು ತಿಳಿಸಿ, ತನ್ನವರನ್ನು ಭರತನ ಜೊತೆಗೆ ದಾರಿ ತೋರಿಸಲು ಕಳಿಸಿಕೊಟ್ಟ. ರಾಮನನ್ನು ತಾನು ಭೇಟಿಯಾದದ್ದು. ರಾಮ, ಲಕ್ಷ್ಮಣ ಸೀತೆಯರು ಎಷ್ಟು ಕಷ್ಟಗಳನ್ನು ಅನುಭವಿಸಿದರು. ಹೇಗೆ ಜೀವನ ಮಾಡಿದರು, ಮೊದಲಾದ ವಿಷಯಗಳನ್ನೂ ಭರತನಿಗೆ ವಿವರಿಸಿ ತಿಳಿಸಿದ.

ತನ್ನ ಅಣ್ಣ ಪಟ್ಟ ಪಾಡುಗಳನ್ನು ಕೇಳಿ ಮತ್ತಷ್ಟು ದುಃಖಿಸಿದ. ಆದಷ್ಟು ಬೇಗ ಅವರೆಲ್ಲರನ್ನೂ ಕಾಣಬೇಕೆಂಬ ತವಕ ಇಮ್ಮಡಿಸಿತು. ಆ ರಾತ್ರಿಯನ್ನು ಗಂಗಾತೀರದಲ್ಲಿ ಕಳೆದು ಬೆಳಿಗ್ಗೆ ಎದ್ದು ಹೊರಡಲು ಸಿದ್ಧರಾದರು. ಗುಹನ ಕಡೆಯವರು, ರಾಜಪರಿವಾರದವರನ್ನು ನದಿ ದಾಟಿಸಲು ಐನೂರು ದೋಣಿಗಳನ್ನು ಸಿದ್ದ ಮಾಡಿದರು. ಪರಿವಾರದವರನ್ನೆಲ್ಲಾ ಜಾಗರೂಕತೆಯಿಂದ ನದಿ ದಾಟಿಸಿದರು. ಭರತ ಅವರೆಲ್ಲರಿಗೂ ಕೃತಜ್ಞತೆ ಹೇಳಿ ಕಳಿಸಿಕೊಟ್ಟ.

ಭರಧ್ವಾಜಾಶ್ರಮ ಹತ್ತಿರವಾದಂತೆ, ಭರತ, ವಸಿಷ್ಠವಾಮದೇವಾದಿಗಳು ಕಾಲುನಡಿಗೆಯಲ್ಲಿ ಸಾಗಿ ಆಶ್ರಮವನ್ನು ತಲುಪಿದರು. ಭರಧ್ವಾಜರನ್ನು ಕಂಡು ನಮಸ್ಕರಿಸಿ ಪರಸ್ಪರ ಕುಶಲವನ್ನು ವಿಚಾರಿಸಿದರು. ಭರತ ತನ್ನ ಅಣ್ಣ ರಾಮನೆಲ್ಲಿದರುವನೆಂದು ವಿಚಾರಿಸಲು, ಭರಧ್ವಾಜರು, ಚಿತ್ರಕೂಟದಲ್ಲಿ ಇರುವ ವಿಷಯವನ್ನು ತಿಳಿಸಿ, ಚಿತ್ರಕೂಟಕ್ಕೆ ಹೋಗಲು ದಾರಿ ತೋರಿಸಿದರು.

ಭರತಾದಿಗಳು ಅವರ ಆತಿಥ್ಯವನ್ನು ಸ್ವೀಕರಿಸಿ, ಕೃತಜ್ಞತೆ ಹೇಳಿ ಬೀಳ್ಕೊಂಡರು.

ಸಾಕಷ್ಟು ದೂರ ಪ್ರಯಾಣ ಮಾಡಿ, ಭರಧ್ವಾಜರು ಹೇಳಿದ ಗುರುತುಗಳನ್ನು ಅನುಸರಿಸಿ ಚಿತ್ರಕೂಟವನ್ನು ತಲುಪಿದರು. ದೂರದಿಂದಲೇ ಚಿತ್ರಕೂಟಗಿರಿಯನ್ನು ನೋಡಿದರು. ಅದರ ಬಳಿಯಿಂದಲೇ ಹೊಗೆಯೇಳುತ್ತಿದ್ದುದರಿಂದ ಅಲ್ಲಿ ಯಾರಾದರೂ ವಾಸವಿರಲೇಬೇಕೆಂದು ಊಹಿಸಿದರು. ಭರತ ತನ್ನ ಜೊತೆಗೆ ಬಂದಿದ್ದವರನ್ನೆಲ್ಲಾ ಅಲ್ಲಿಯೇ ಉಳಿಯುವಂತೆ ಹೇಳಿ, ಅಸ್ಪಷ್ಟವಾಗಿ ಕಣ್ಣಿಗೆ ಬಿದ್ದ ಕುಟೀರದ ಕಡೆಗೆ ಹೆಜ್ಜೆ ಹಾಕಿದ.

ಅಂದು ರಾಮ, ಲಕ್ಷ್ಮಣ ಸೀತೆಯರು ಕೆಲಸ ಕಾರ್ಯ ಮುಗಿಸಿ ಬಿಡುವುದಾಗಿ ಕುಟೀರದ ಜಗುಲಿಯ ಮೇಲೆ ಕುಳಿತಿದ್ದರು. ಇದ್ದಕ್ಕಿದ್ದಂತೆ ಧೂಳಿನ ಮೋಡವೊಂದು ದೂರದಲ್ಲಿ ಕಾಣಿಸಲು, ಲಕ್ಷ್ಮಣ ಕುತೂಹಲದಿಂದ ಹತ್ತಿರವಿದ್ದ ಮರವೊಂದನ್ನು ಏರಿ ನೋಡಿದ. ದೂರದಲ್ಲಿ ಸೈನ್ಯವೊಂದು ಬರುತ್ತಿದ್ದುದು ಕಾಣಿಸಿತು.

"ಕಾಡಿಗೆ ಸೈನ್ಯ ಬರುವುದೆಂದರೆ!" ಲಕ್ಷ್ಮಣ ಆಶ್ಚರ್ಯದಿಂದ ಉದ್ಗರಿಸಿ, ಮತ್ತೊಮ್ಮೆ ಗಮನವಿಟ್ಟು ನೋಡಿದ. ದೂರದಲ್ಲಿ ಭರತ ನಡೆದು ಬರುತ್ತಿದ್ದುದು ಕಾಣಿಸಿತು. ಹುಬ್ಬೇರಿಸಿ ಕೂಗಿ ಹೇಳಿದ. 'ಅಣ್ಣ ನೋಡಿದೆಯಾ? ಭರತ ನಮ್ಮ ಬೆನ್ನು ಹತ್ತಿ ಇಲ್ಲಿಗೂ ಬಂದ. ನಮ್ಮಿಂದ ಏನಾದರೂ ತೊಂದರೆಯಾದೀತೆಂದು ಇಲ್ಲಿಗೇ ಸೈನ್ಯವನ್ನು ತಂದಿದ್ದಾನೆ. ಅಪ್ಪಣೆ ಕೊಡು, ಅವನು ಆಕ್ರಮಣ ಮಾಡುವ ಮೊದಲೇ ನಾನು ಅವನಿಗೆ ಬುದ್ಧಿ ಕಲಿಸಿ ಬರುತ್ತೇನೆ" ಎಂದು ಗುಡುಗಿದ.

ರಾಮ ಮಾತ್ರ ಪ್ರಶಾಂತವಾಗಿಯೇ ಇದ್ದ. ಅವನು ಲಕ್ಷ್ಮಣನಿಗೆ, "ಲಕ್ಷ್ಮಣಾ ನಿನ್ನ ಆತುರ ಬುದ್ಧಿಗೆ ಏನು ಹೇಳಬೇಕು. ಭರತ ಬರುವುದಾದರೆ ಬರಲಿ. ವಿಷಯವೇನೆಂದು ತಿಳಿಯದೆ ಅವನ ಮೇಲೆ ಸಿಟ್ಟಾಗುವುದು ನ್ಯಾಯವಲ್ಲ. ಅಲ್ಲದೆ ನನ್ನ ಪ್ರಿಯ ಸೋದರ ಭರತ ಎಂಥವನೆಂಬುದು ನನಗೆ ಗೊತ್ತು. ಅವನೆಂದಿಗೂ ಯಾರಿಗೂ ಒಂದು ನಿಷ್ಠುರ ಮಾತನ್ನೂ ಆಡಿಲ್ಲ. ಯಾರಿಂದ ಏನನ್ನೂ ಬಯಸುವುದಿಲ್ಲ. ಆದ್ದರಿಂದ ಸ್ವಲ್ಪ ತಾಳ್ಮೆಯಿಂದಿರು" ಎಂದು ಬುದ್ಧಿ ಹೇಳಿದ.

ಕುಟೀರಕ್ಕೆ ಹತ್ತಿರವಾಗುತ್ತಿದ್ದಂತೆ ಭರತನ ದುಃಖ, ಉಮ್ಮಳ, ಸಂತೋಷಗಳೆಲ್ಲವೂ ಒಟ್ಟಿಗೆ ನುಗ್ಗಿ ಬಂದವು. ರಾಮ ಕಣ್ಣಿಗೆ ಬಿದ್ದ. ದೂರದಿಂದಲೇ ಕೈಚಾಚಿ, ಓಡಿ ಅವನ ಪಾದಗಳ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳಲು ತೊಡಗಿದ. ಕಣ್ಣೀರಿನಿಂದ ಅಣ್ಣನ ಪಾದ ತೋಯಿಸಿದ. ಭರತನ ಭಾವುಕತೆಯಿಂದ ಕರಗಿ ಹೋದ ರಾಮ ಅವನನ್ನು ಎಬ್ಬಿಸಿ ಪ್ರೀತಿಯಿಂದ ಆಲಂಗಿಸಿಕೊಂಡ.

•

ಭರತ ಅಣ್ಣ ರಾಮನಿಗೆ ಅಯೋಧ್ಯೆಯಲ್ಲಿ, ಅವನ ವನವಾಸಕ್ಕೆ ಹೊರಟು ಬಂದಾಗಿನಿಂದ ಏನೆಲ್ಲಾ ನಡೆಯಿತೆಂಬುದನ್ನು ಸಾದ್ಯಂತವಾಗಿ ವಿವರಿಸಿದ. ಹಾಗೆಯೇ ತಂದೆಯ ಸಾವಿನ ಸಂಗತಿಯನ್ನೂ ತಿಳಿಸಿದ. ಹೇಳುವಾಗ ಭರತನ ಗಂಟಲು ತುಂಬಿ ಬಂತು, 'ಅಣ್ಣ ಶತಾಯುಷಿಯಾಗಿ ಬಾಳ ಬೇಕಿದ್ದ ತಂದೆಯ ಸಾವಿಗೆ ನನ್ನ ತಾಯಿ ಕಾರಣಳಾದಳು. ನಿನ್ನ ಈ ಕಷ್ಟಗಳಿಗೂ ಅವಳೇ ಮೂಲವಾದಳು. ನಿನ್ನ ಅಗಲಿಕೆಯ ನೋವನ್ನು ಸಹಿಸಿಕೊಳ್ಳಲಾಗದೆ ತಂದೆಯವರು ಕಣ್ಣು ಮುಚ್ಚಿದರು. ನನ್ನ ತಾಯಿ ಮತ್ತು ನನ್ನನ್ನು ಕ್ಷಮಿಸು, ತಾಯಿಗೂ ಪಶ್ಚಾತ್ತಾಪವಾಗಿದೆ, ನೀನು ಬಂದು ಕೂಡಲೇ ರಾಜ್ಯಭಾರವನ್ನು ವಹಿಸಿಕೊಳ್ಳಬೇಕೆಂಬುದು ನನ್ನ ತಾಯಿ ಮತ್ತು ನಮ್ಮೆಲ್ಲರ ಅಭಿಲಾಷೆ ನೀನು ಕೂಡಲೇ ನಮ್ಮೊಂದಿಗೆ ಹೊರಡು" ಎಂದು ಪ್ರಾರ್ಥಿಸುವ ಧ್ವನಿಯಲ್ಲಿ ಹೇಳಿದ.

ಎಷ್ಟು ಬೇಡವೆಂದರೂ ಅವನನ್ನು ಹಿಂಬಾಲಿಸಿ ಬಂದ ಸುಮಂತ್ರ, ವಸಿಷ್ಠರೂ ಕೂಡ ಭರತನ ಆಸೆಯನ್ನು ದಶರಥ ಮಹಾರಾಜರ ಆಸೆಯನ್ನು ತಮ್ಮೆಲ್ಲರ ಪ್ರಾರ್ಥನೆಯನ್ನು ಮನ್ನಿಸಿ ಪೂರೈಸಬೇಕೆಂದು ಕೇಳಿಕೊಂಡರು.

ರಾಮ ವಿನಯದಿಂದ ಹೇಳಿದ, "ನಿಮ್ಮೆಲ್ಲರ ಪ್ರೀತಿ, ವಿಶ್ವಾಸಗಳನ್ನು ಅರ್ಥಮಾಡಿಕೊಳ್ಳಬಲ್ಲೆ. ಆದರೆ ತಂದೆಯವರ ಆದೇಶವನ್ನು, ತಾಯಿಗೆ ಕೊಟ್ಟ ಅವರ ವಚನವನ್ನು ಮುರಿದು, ಮೀರಿ ಬಂದರೆ ಸ್ವರ್ಗದಲ್ಲಿ ಇರುವ ತಂದೆಯವರ ಆತ್ಮ ಸಂತೋಷಿಸುವುದೇನು?

"ನಾನೆಷ್ಟು ದುರದೃಷ್ಟವಂತ. ತಂದೆಯವರ ಕಡೆಯ ಕ್ಷಣಗಳಲ್ಲಿ ಅವರ ಜೊತೆ ಇರಲು ಸಾಧ್ಯವಾಗಲಿಲ್ಲ. ಅವರ ಅಂತಿಮ ದರ್ಶನವೂ ಸಾಧ್ಯವಾಗಲಿಲ್ಲ. ನನ್ನ ತಾಯಂದಿರ ದುಃಖವನ್ನೂ ದೂರಮಾಡಲಾಗಲಿಲ್ಲ. ಅವರನ್ನು ಒಮ್ಮೆ ಕಂಡರೆ, ಮಾತನಾಡಿಸ ಬೇಕೆನಿಸಿದೆ" ಎಂದು ದುಃಖದಿಂದ, ಮಾತನ್ನು ಮುಂದುವರಿಸಲಾಗದೆ ಸುಮ್ಮನಾದ.

ಭರತ ತಾಯಂದಿರು ಬಂದಿರುವ ಸುದ್ದಿಯನ್ನು ತಿಳಿಸಿದ. ತಮ್ಮ ಜೊತೆ ಬಂದಿದ್ದ ಸೇವಕನನ್ನು ಕಳಿಸಿ ತಾಯಂದಿರನ್ನು ಕರೆಸಿದ. ವಸಿಷ್ಠರೇ ಮುಂದಾಗಿ ಮೂವರು ರಾಣಿಯರನ್ನೂ ಕುಟೀರದೊಳಕ್ಕೆ ಕರೆದೊಯ್ದರು.

ಮಕ್ಕಳನ್ನು ಕಾಣುತ್ತಿದ್ದಂತೆ ತಾಯಂದಿರು ಸಂತೋಷಾತಿರೇಕದಿಂದ ಅವರನ್ನು ಬರಸೆಳೆದು ಬಿಗಿದಪ್ಪಿದರು. ಒಂದು ಕ್ಷಣ ಸಾವಿನ ದುಃಖ ದೂರವಾಯಿತು. ಕೈಕೆಯಿಗೆ ತನ್ನ ಮುಖ ತೋರಿಸಲೂ ಸಂಕೋಚವಾಯಿತು. ಅವಳನ್ನು ಅಪರಾಧಿಭಾವ, ಪಾಪಭೀತಿ ಕಾಡುತ್ತಿದ್ದವು. ಪಶ್ಚಾತ್ತಾಪದಿಂದ ಬೆಂದು ಹೋಗಿದ್ದಳು. ರಾಮನಲ್ಲಿ ಕ್ಷಮೆ ಕೇಳದೆ, ಅವನನ್ನು ರಾಜನನ್ನಾಗಿ ನೋಡದೆ ಅವಳಿಗೆ ಶಾಂತಿ ಇಲ್ಲ. ಕಣ್ಣೀರುಗರೆಯುತ್ತಾ, "ಮಗು ರಾಮ ಈ ಪಾಪಿ ತಾಯಿಯನ್ನು ಕ್ಷಮಿಸುವೆಯಾ? ನನ್ನ ಸ್ವಾರ್ಥ, ಕ್ರೌರ್ಯಗಳಿಂದಾಗಿ ನಿನಗೆಷ್ಟು ತೊಂದರೆ ಕೊಟ್ಟೆ; ಮಹಾರಾಜರ ಮನಸ್ಸಿಗೆ, ಸಾಯುವಷ್ಟರ ಮಟ್ಟಿಗೆ ಘಾಸಿ ಮಾಡಿದೆ. ನಾನು ವರಗಳನ್ನು ಕೇಳಿದ್ದೇ ಇಷ್ಟೆಲ್ಲ ಅನಾಹುತಗಳಿಗೆ ಕಾರಣವಾಯಿತು. ಪ್ರಪಂಚದಲ್ಲಿಯೇ ನನ್ನಷ್ಟು ಸ್ವಾರ್ಥಿ, ಕ್ರೂರಿ, ಪಾಪಿ ಇರಲಾರರು. ನಾನು ಮಾಡಿದ ಅಪರಾಧಕ್ಕೆ ಯಾವ ಶಿಕ್ಷೆಯೂ ಸಾಲದು; ಎಂತಹ ಕ್ಷಮೆಯೂ ಸಾಧ್ಯವಾಗದು. ಆದರೂ ಮಗು ನಿನ್ನನ್ನು ನಾನೊಂದು, ಉಪಕಾರ ಮಾಡುವಂತೆ ಕೇಳಿಕೊಳ್ಳುತ್ತೇನೆ. ಮಾಡುತ್ತೀಯ ಮಗೂ?"

ರಾಮನ ಹೃದಯ ತುಂಬಿ ಬಂದಿತ್ತು. ತಾಯಿಯ ದೈನ್ಯ ಯಾಚನೆಯಿಂದ ಅವನ ಮನಸ್ಸು ಮುದುಡಿ ಹೋಗಿತ್ತು. ಹೇಳಿದ, 'ಹೇಳು ತಾಯಿ, ನೀನು ಕೇಳುವುದನ್ನು ಉಪಕಾರವೆನ್ನಬೇಡ. ಅಜ್ಞೆ ಎನ್ನು."

"ಮಗೂ ನಿಜವಾಗಿಯೂ ನಿನ್ನ ಈ ತಾಯಿಯ ಮೇಲೆ ಅಸಮಾಧಾನ ವಿಲ್ಲದಿದ್ದರೆ, ಅಯೋಧ್ಯೆಗೆ ಹಿಂದಿರುಗಿ ಬಾ. ರಾಜ್ಯವನ್ನು ಒಪ್ಪಿಸಿಕೋ. ಪ್ರಜೆಗಳ ನಿರೀಕ್ಷೆಗಳನ್ನು ಪೂರೈಸು" ಎಂದು ಪ್ರಾರ್ಥಿಸಿದಳು.

ರಾಮನಿಗೆ ತಾಯಿ ಕೈಕೇಯಿಯ ನೋವು, ಅವಳು ಪಡುತ್ತಿರುವ ಪಶ್ಚಾತ್ತಾಪಗಳು ಅರ್ಥವಾದವು. ಅವಳ ಬಗ್ಗೆ ರಾಮನಿಗೆ ಎಳ್ಳಷ್ಟು ಕಹಿ ಭಾವನೆ ಇರಲಿಲ್ಲ. ಅವಳ ಬಗ್ಗೆ ಇರಿಸಿಕೊಂಡಿದ್ದ ಪ್ರೀತಿಯೂ ಕಡಿಮೆಯಾಗಿರಲಿಲ್ಲ. ವನವಾಸಕ್ಕೆ ಆದೇಶಿಸಿದಾಗಲೂ ತನಗೆ ನೋವಾಗಿ ರಲಿಲ್ಲ. ತಾಯಿಯನ್ನು ಸಮಾಧಾನ ಪಡಿಸಬೇಕೆಂದುಕೊಂಡು, "ಅಮ್ಮ,

ವಿನಾಕಾರಣ ನಿಮ್ಮನ್ನು ಹಳಿದುಕೊಳ್ಳಬೇಡಿ. ವಿಧಿಯಾಟದಂತೆ ಎಲ್ಲವೂ ನಡೆಯಿತೇ ವಿನಃ ನೀವು ಕಾರಣರಲ್ಲ. ಆದ್ದರಿಂದ ಚಿಂತೆಯನ್ನು ಬಿಟ್ಟುಬಿಡಿ. ಮೊದಲೆಷ್ಟು ನಿಮ್ಮನ್ನು ಪ್ರೀತಿಸುತ್ತಿದ್ದೆನೋ ಈಗಲೂ ನಿಮ್ಮ ಮೇಲೆ ಅಷ್ಟೇ ಪ್ರೀತಿಯಿದೆ. ಆದರೆ ನಿಮ್ಮ ಮಾತಿನಂತೆ ಈಗ ನಿಮ್ಮ ಜೊತೆ ಬರಲಾಗುವುದಿಲ್ಲ. ಅದಕ್ಕಾಗಿ ನೀವು ನನ್ನನ್ನು ಕ್ಷಮಿಸಬೇಕು. ಬಂದರೆ ತಂದೆಯ ಮಾತನ್ನು ಮೀರಿದಂತಾಗುತ್ತದೆ" ಎಂದು ವಿನಯದಿಂದ ನುಡಿದ.



ಭರತನನ್ನು ಬಲವಂತಪಡಿಸಿ ರಾಜ್ಯವನ್ನು ನೋಡಿಕೊಳ್ಳಲು ಹೇಳಿದ. ಭರತ ಅಣ್ಣನ ಮಾತನ್ನು ತಳ್ಳಿ ಹಾಕಲು ಸಾಧ್ಯವಾಗದೆ ಒಂದು ಷರತ್ತಿನೊಂದಿಗೆ ಒಪ್ಪಿಕೊಂಡ. ಅಣ್ಣನ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ಅಣ್ಣನ ಪರವಾಗಿ, ರಾಜ್ಯವನ್ನು ಮೇಲ್ವಿಚಾರಕನಂತೆ ನೋಡಿಕೊಳ್ಳುವುದಾಗಿಯೂ ಅವಧಿ ಮುಗಿಯುತ್ತಿದ್ದಂತೆ ರಾಮ ಹಿಂತಿರುಗಿ ಬಂದು ರಾಜ್ಯವನ್ನು ವಹಿಸಿಕೊಳ್ಳಬೇಕೆಂದೂ ಷರತ್ತೊಡ್ಡಿ ಪಾದುಕೆಗಳನ್ನು ಪಡೆದು ತನ್ನವರೊಂದಿಗೆ ಹಿಂದಿರುಗಿದ.



## ಪಂಚವಟಿಯ ಕಡೆಗೆ ಪಯಣ

ಭರತ, ತಾಯಂದಿರು ಮತ್ತು ರಾಜಪರಿವಾರವನ್ನು ಬೀಳ್ಕೊಟ್ಟು ಕಳುಹಿದ ನಂತರ, ರಾಮನ ದುಗುಡ ಹೆಚ್ಚಾಯಿತು. ಮನಸ್ಸಿಗೆ ಸಂತೋಷವೇ ಇರಲಿಲ್ಲ. ಅದರಿಂದ ಜಾಗವೇ ಬೇಸರವೆನಿಸಿತು. ತನ್ನ ಪರಿವಾರದವರ ಶೋಕತಪ್ತ ಮುಖಗಳೇ ನೆನಪಿಗೆ ಬರುತ್ತಿದ್ದವು. ಅದಕ್ಕಾಗಿ ಬೇರೆಲ್ಲಿಗಾದರೂ ಹೋಗಬೇಕೆನಿಸಿತು.

ಲಕ್ಷ್ಮಣ, ಸೀತೆಯರೊಂದಿಗೆ ಮಾತನಾಡಿ, ಕಡೆಗೆ ಒಂದು ದಿನ ಆ ಪ್ರದೇಶದಿಂದ ಹೊರಟು ದಟ್ಟವಾದ ಕಾಡನ್ನು ಪ್ರವೇಶಿಸಿದರು. ಅಲ್ಲಲ್ಲಿ ಆಶ್ರಮಗಳು, ಒಣಗಲು ಹಾಕಿದ ನಾರು ಮಡಿಗಳು, ಮೇಲೇಳುತ್ತಿದ್ದ ಹೊಗೆ, ಎಲ್ಲವನ್ನೂ ಗಮನಿಸಿದ ಮೇಲೆ ಅದು ಜನವಾಸವಾಗಿರುವುದು ಖಾತ್ರಿಯಾಯಿತು.

ಆ ಪ್ರದೇಶ ಪ್ರಶಾಂತವಾಗಿಯೂ ನಿಸರ್ಗ ಸೌಂದರ್ಯದ ತಾಣವಾಗಿಯೂ ಇದ್ದುದೇ ಅಲ್ಲದೆ ತಪಸ್ಸಿನಿಂದ ಕಾಂತಿಯುಕ್ತವೂ ತೇಜಸ್ವಿಯೂ ಆದ ಋಷಿಮುನಿಗಳೂ ಕಾಣುತ್ತಿದ್ದುದರಿಂದ ಅವರಿಗೆ ಆ ಜಾಗ ತುಂಬ ಹಿತವೆನಿಸಿತ್ತು. ಎಲ್ಲ ಆಶ್ರಮಗಳಿಗೆ ಭೇಟಿಕೊಟ್ಟು ಋಷಿಗಳ ಯೋಗ ಕ್ಷೇಮವನ್ನು ವಿಚಾರಿಸಿ, ಅವರಿಗೆ ಗೌರವ ಸಲ್ಲಿಸಿ ಆಶೀರ್ವಾದ ಪಡೆದರು. ಇನ್ನೇನು ಎಲ್ಲರಿಂದ ಬೀಳ್ಕೊಂಡು ಒಂದೆರಡು ಹೆಜ್ಜೆ ಹಾಕಿರಬೇಕು, ಅಷ್ಟರಲ್ಲಿ ದೈತ್ಯಾಕಾರದ ಪ್ರಾಣಿಯೊಂದು ಅವರ ಮೇಲೆ ಜಿಗಿಯಿತು. ಹತ್ತಿರದಿಂದ ನೋಡಿದ ಮೇಲೆ ಅದು ಪ್ರಾಣಿಯಾಗಿರಲಿಲ್ಲ ನರಮಾಂಸ ಭಕ್ಷಕ ರಾಕ್ಷಸನಾಗಿದ್ದ.

ಅವರ ಮೇಲೆ ಬಿದ್ದವನೇ, ಸೀತೆಯನ್ನು ಅಪಹರಿಸಿಕೊಂಡು ವೇಗವಾಗಿ ಓಡಿದ. ರಾಮ, ಲಕ್ಷ್ಮಣರು ಅವನನ್ನು ಹಿಂಬಾಲಿಸಿದರು. ಆದರೂ

ಅವನನ್ನು ಹಿಡಿಯಲಾಗದೆ ಅಸಹಾಯಕರಾಗಿ ನಿಂತುಬಿಟ್ಟರು. ಇದ್ದೆಡೆಯಿಂದಲೇ ಬಾಣಗಳನ್ನು ಬಿಟ್ಟರಾದರೂ ಅದರಿಂದೇನೂ ಪ್ರಯೋಜನವಾಗಲಿಲ್ಲ, ಕಾರಣ ಆ ರಾಕ್ಷಸನಿಗೆ, ಯಾವುದೇ ಶಸ್ತ್ರಾಸ್ತ್ರಗಳಿಂದ ಸಾವು ಸಂಭವಿಸದಂತೆ ಬ್ರಹ್ಮನು ವರ ನೀಡಿದ್ದನು. ಅವನನ್ನು, ಸೀತೆಯನ್ನು ಬಿಟ್ಟು ಬಿಡುವಂತೆ ಪರಿಪರಿಯಾಗಿ ಬೇಡಿಕೊಂಡರು. ಆದರೆ ಆ ರಾಕ್ಷಸ ಅವರಿಗೆ ತನ್ನ ವರದ ಬಗ್ಗೆ ತಿಳಿಸಿ ಅಟ್ಟಹಾಸದಿಂದ ಬೀಗಿದ. ತಾನು ಸಾಮಾನ್ಯನಲ್ಲ; ತನ್ನ ಹೆಸರು 'ವಿರಾಧ' ಎಂದು ಪರಿಚಯ ಹೇಳಿಕೊಂಡ.

ಬಹುಶಃ ಆ ವಿರಾಧನಿಗೆ ಸೀತೆಯನ್ನು ಹಿಡಿದು ಆಟವಾಡಿಸಿದ್ದು ಸಾಕೆನಿಸಿ, ಅವಳನ್ನು ಕೆಳಗೆ ಇಳಿಸಿದ. ರಾಮ, ಲಕ್ಷ್ಮಣರನ್ನು ಮುಷ್ಠಿಯಲ್ಲಿ ಹಿಡಿದು, ಎತ್ತಿ ತನ್ನ ಹೆಗಲ ಮೇಲೆ ಕೂರಿಸಿದ ಮತ್ತು ಅವರನ್ನು ಹೊತ್ತು ಓಡಲು ತೊಡಗಿದ. ಇದನ್ನು ಕಂಡು ಸೀತೆ ಭಯದಿಂದ ನಡುಗಿದಳು. ಸಹಾಯಕ್ಕಾಗಿ ಕೂಗಿದಳು. ಆದರೆ ಆ ನಿರ್ಜನ ಪ್ರದೇಶದಲ್ಲಿ ಅವಳ ಆರ್ತ ಕರೆ ಪ್ರತಿಧ್ವನಿಸಿತೇ ಹೊರತು ಯಾರೂ ಬರಲಿಲ್ಲ.

ರಾಮ, ಲಕ್ಷ್ಮಣರು, ಆ ವಿರಾಧನ ಹೆಗಲ ಸವಾರಿಯಲ್ಲಿ ಬಹಳ ಹೊತ್ತು ಕಳೆದರು. ಏನಾದರೂ ಉಪಾಯ ಯೋಚಿಸಿ ಅವನನ್ನು ಮುಗಿಸಬೇಕೆಂದುಕೊಂಡರು. ಶಸ್ತ್ರಾಸ್ತ್ರಗಳಿಂದ ಸಾವಿಲ್ಲದಿದ್ದರೆ, ಕೈಕಾಲು ಮುರಿದು ಸಾಯಿಸಬಹುದಲ್ಲ, ಎಂದು ಯೋಚಿಸಿ ತಮಗೆ ಸುಲಭವಾಗಿ ಕೈಗೆಟುಕಿದ ಅವನ ತೋಳುಗಳನ್ನು ತಿರುಚಿ ಮುರಿದು ಹಾಕಿದರು. ನೋವಿನಿಂದ ಕಿರುಚುತ್ತ ಕೆಳಗೆ ಬಿದ್ದ. ಅದೇ ಸಮಯ ನೋಡಿ ಹೆಗಲಿಳಿದು ಅವನನ್ನು ತಮ್ಮ ಕೈಗಳಿಂದ ಜಜ್ಜಿ ಸಾಯಿಸಿದರು.

ಅಲ್ಲಿಂದ ಮುಂದಕ್ಕೆ ಪ್ರಯಾಣ ಬೆಳೆಸಿ, ಅತ್ರಿ, ಋಷಿ ದಂಪತಿಗಳನ್ನು ಕಂಡು ಮಾತನಾಡಿಸಿ ಗೌರವ ಸಮರ್ಪಿಸಿದರು. ಅವರೆಲ್ಲರ ಆದರಾತಿಥ್ಯ, ಆಶೀರ್ವಾದಗಳನ್ನು ಪಡೆದು, ಮುಂದೆ ನಡೆದು ಅಲ್ಲಿನ ಪ್ರಾಂತದಲ್ಲಿದ್ದ ಎಲ್ಲ, ಋಷಿ, ಮುನಿಗಳನ್ನು ಕಂಡು ಮಾತನಾಡಿಸಿದರು. ರಾಮ, ಲಕ್ಷ್ಮಣ, ಸೀತೆಯರನ್ನು ಅವರೆಲ್ಲರೂ ಸಂಭ್ರಮಗಳಿಂದ ಬರಮಾಡಿಕೊಂಡರು. ತಮ್ಮಾಶೀರ್ವಾದ, ತಪಸ್ಸಿನ ಫಲವನ್ನು ಅವರಿಗೆ ಧಾರೆಯೆರೆದು ಕೊಟ್ಟರು;

ಪ್ರತಿಯಾಗಿ ರಾಮ, ರಾಕ್ಷಸರಿಂದ ಅವರೆಲ್ಲರ ಮಾನ, ಪ್ರಾಣ, ಯಜ್ಞ, ಯಾಗಾದಿಗಳ ರಕ್ಷಣೆಯ ಭರವಸೆಯನ್ನು ನೀಡಿದ.

ಅತ್ರಿ ಮಹರ್ಷಿಗಳಾದ ಮೇಲೆ ಮುಂದೆ ಅಗಸ್ತ್ಯರನ್ನು ಕಾಣಲು ಮುಂದಾದರು. ಅಷ್ಟು ಹೊತ್ತಿಗೆ ಅವರ ವನವಾಸದ ಹತ್ತು ವರ್ಷಗಳು ಕಳೆದಿದ್ದವು. ಅಗಸ್ತ್ಯ ಋಷಿಗಳೂ ವಿಶ್ವಾಮಿತ್ರ ಋಷಿಯಷ್ಟೇ ಲೋಕ ಪ್ರಸಿದ್ಧರೂ ಮಹಿಮಾವಂತರೂ ಆಗಿದ್ದರು. ಮೂರು ಲೋಕಗಳಲ್ಲಿಯೂ ಅಗಸ್ತ್ಯರ ಕೀರ್ತಿ ಹಬ್ಬಿತ್ತು. ಅದ್ಭುತ ಪವಾಡಗಳನ್ನು ಮೆರೆಸಿದ್ದರು. ಇಲ್ವಲ, ವಾತಾಪಿಗಳೆಂಬ ರಾಕ್ಷಸರು ಮೋಸ ಮಾಡಲು ಯತ್ನಿಸಿದಾಗ, ವಾತಾಪಿಯನ್ನು ತಮ್ಮೊಳಗೇ ಜೀರ್ಣಿಸಿಕೊಂಡು ಬಿಟ್ಟಿದ್ದರು. ಸಮುದ್ರವನ್ನೇ ಆಪೋಷಣ ಮಾಡಿ ಬಿಟ್ಟರು. ಮೇರೆ ಮೀರಿ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ತಲೆ ತಗ್ಗಿಸಿ, ಬೆಳೆಯದಿರುವಂತೆ ಆದೇಶಿಸಿ ನಿಲ್ಲಿಸಿಬಿಟ್ಟರು. ಇಂತಹ ಮಹಾತ್ಮರನ್ನು ಕಾಣುವ ಕಾತುರದಿಂದ ಅಗಸ್ತ್ಯರಲ್ಲಿಗೆ ಬಂದರು. ಅಗಸ್ತ್ಯರನ್ನು ಕಂಡು ಪೂಜ್ಯಭಾವನೆಯಿಂದ ಪಾದಸ್ಪರ್ಶ ಮಾಡಿ ನಮಸ್ಕರಿಸಿದರು. ಅವರ ವಿನಯ ವಿಧೇಯತೆಗಳನ್ನು ಮೆಚ್ಚಿ ಪ್ರೀತಿಯಿಂದ ಅಗಸ್ತ್ಯರು ಮನೆಯವರ ಬಗ್ಗೆ ವಿಚಾರಿಸಿದರು. "ರಾಮ ನೀವು ಬರುವುದನ್ನೇ ಎದುರು ನೋಡುತ್ತಿದ್ದೆ. ನಡೆದ ವಿಷಯವೆಲ್ಲವೂ ನನಗೆ ತಿಳಿಯಿತು. ಹಾಗೆಯೆ ಋಷಿ ಮುನಿಗಳಿಗೆ ನೀನು ಮಾಡಿದ ಸಹಾಯದ ಬಗ್ಗೆಯೂ ಕೇಳಿದೆ. ದೇವರು ನಿನಗೆ ಒಳ್ಳೆಯದು ಮಾಡಲಿ. ವನವಾಸವನ್ನು ಮುಗಿಸಿ ಅಯೋಧ್ಯೆಯನ್ನು ಧರ್ಮದಿಂದ ಆಳು. ತೆಗೆದುಕೋ ಈ ಕೋದಂಡವನ್ನು, ವಿಷ್ಣುವಿಗಾಗಿ ಮಾಡಿದ, ಇದು ಜಗತ್ತಿನಲ್ಲೇ ಅದ್ಭುತವಾದದ್ದು. ಇದರ ಜೊತೆಗೆ ಈ ಅಕ್ಷಯ ಬತ್ತಳಿಕೆಯನ್ನೂ ಸ್ವೀಕರಿಸು. ಅಮೂಲ್ಯವಾದ, ದೈವಿಕವಾದ ಬಾಣಗಳು ಇದರಿಂದ ಲಭಿಸುತ್ತದೆ. ನಿನ್ನ ಭವಿಷ್ಯ ಸುಖಮಯವಾಗಲಿ. ಲಕ್ಷ್ಮಣನಂತಹ ತಮ್ಮ, ಅರುಂಧತಿಯಂತಹ ಮಡದಿ ಸೀತೆಯನ್ನು ಪಡೆದ ನೀನು ನಿಜವಾಗಿಯೂ ಅದೃಷ್ಟವಂತ. ನಿನ್ನ ತಂದೆಯ ಬಯಕೆಯನ್ನು ಆದಷ್ಟು ಬೇಗ ಪೂರೈಸುವಂತಾಗು" ಎಂದು ಹೇಳಿ

ಪ್ರೀತಿಯಿಂದ ಆಶೀರ್ವದಿಸಿ ಬೀಳ್ಕೊಟ್ಟರು. ಹಾಗೆಯೇ ಮುಂದೆ ಅವರು ಇರಲು ಪ್ರಶಸ್ತವಾದ ಪಂಚವಟಿ ಪ್ರದೇಶವನ್ನು ಸೂಚಿಸಿದರು.

ಅಗಸ್ತ್ಯರು ಸೂಚಿಸಿದ್ದ ಪಂಚವಟಿ ಹಾದಿ ಹಿಡಿದು ಮುಂದೆ ಹೋದರು. ಮುಂದೆ ನಡೆದಂತೆ ಕಾಡು ಮತ್ತಷ್ಟು ದಟ್ಟವಾಗಿತ್ತು. ದಾರಿಯುದ್ಧಕ್ಕೂ ಕ್ರೂರ ಪ್ರಾಣಿಗಳ, ರಾಕ್ಷಸರ ಹಾವಳಿಯನ್ನು ಎದುರಿಸಬೇಕಾಯಿತು. ಆದರೂ ಒಂದಿಷ್ಟೂ ಹೆದರದೆ, ಹಿಮ್ಮೆಟ್ಟದೆ ಎಲ್ಲವನ್ನು ಎದುರಿಸಿದ ಗೆಲ್ಲುತ್ತ ಮುಂದೆ ಸಾಗಿದರು.

ಪಂಚವಟಿ ಹತ್ತಿರವಾಗುತ್ತಿದ್ದಂತೆ ಪರಿಸರವೇ ಬದಲಾಯಿತು. ಸುತ್ತಲಿನ ಪ್ರಕೃತಿ ಸೌಂದರ್ಯ, ಪ್ರಶಾಂತತೆ ಸೀತೆಯನ್ನು ಭಾವೋದ್ರೇಕಗೊಳಿಸಿದವು. ಎತ್ತ ಕಣ್ಣು ಹಾಯಿಸಿದರೂ ಪ್ರಕೃತಿಯ ವೈವಿಧ್ಯಮಯ ಬಣ್ಣಗಳು! ಅಸ್ಪಷ್ಟವಾದ ಆದರೆ ಮಧುರವಾದ ಸದ್ದುಗಳು ಕಿವಿಗೆ ಹಿತವಾಗಿದ್ದವು. ಸ್ವಲ್ಪ ದೂರ ಹೆಜ್ಜೆ ಹಾಕಿದ ಮೇಲೆ ದೊಡ್ಡದೊಂದು ಹಕ್ಕಿ ಅಡ್ಡವಾಗಿ ಕುಳಿತಿತ್ತು. ಯಾರೆಂದು ವಿಚಾರಿಸಿದಾಗ ಆ ಹಕ್ಕಿ ಹೇಳಿತು. "ನಾನು ಸಂಪಾತಿ. ನಿನ್ನ ತಂದೆ ದಶರಥ ನನ್ನ ಗೆಳೆಯ. ನಡೆದದ್ದೆಲ್ಲ ನನಗೆ ಗೊತ್ತಿದೆ. ಮಗು ರಾಮ, ನಿನಗೆ ಏನೇ ಕಷ್ಟ ಬಂದರೂ ಸಂಕೋಚವಿಲ್ಲದೆ ತಿಳಿಸು. ನಾನು ನಿನಗೆ ಸಹಾಯ ಮಾಡುತ್ತೇನೆ" ಎಂದಿತು.

ರಾಮನಿಗೆ ಆ ಹಕ್ಕಿ ತಂದೆಯ ಗೆಳೆಯನೆಂದು ತಿಳಿದ ಮೇಲೆ ಸಂತೋಷವಾಗಿ, ತಂದೆಗೆ ತೋರುವ ಗೌರವವನ್ನು ತೋರಿ, ಧನ್ಯವಾದ ಹೇಳಿ ಮುಂದೆ ಸಾಗಿದ.

ಪಂಚವಟಿ ತಲುಪಿದ ಮೇಲೆ ಅವರ ಸಂತೋಷಕ್ಕೆ ಮೇರೆಯಿಲ್ಲದಂತಾಯಿತು. ಅಲ್ಲಿನ ಮೋಹಕ ಪರಿಸರ ಅವರನ್ನು ಮಂತ್ರ ಮುಗ್ಧಗೊಳಿಸಿತು. ಅಲ್ಲಿ ವಾಸಮಾಡುವುದೇ ಒಂದು ಅದೃಷ್ಟವೆಂದು ಭಾವಿಸಿದರು.

ಲಕ್ಷ್ಮಣ ಅಣ್ಣನ ಅಪ್ಪಣೆ ಪಡೆದು ಸುಂದರವಾದ, ಕಲಾತ್ಮಕವಾದ ಕುಟೀರವನ್ನು ನಿರ್ಮಿಸಿದ. ಆ ಮೂವರೂ ಆ ಕುಟೀರದಲ್ಲಿ ಸಂತೋಷವಾಗಿ ಕಾಲ ಕಳೆದರು. ದಿನಗಳು ಕಳೆದದ್ದೇ ತಿಳಿಯುತ್ತಿರಲಿಲ್ಲ.

ಒಂದು ದಿನವೂ ಅವರಿಗೆ ಬೇಸರವೆನಿಸಲಿಲ್ಲ. ವನವಾಸದ ಅವಧಿ ಕಳೆಯುವುದನ್ನು ಮಾತ್ರ ನಿರೀಕ್ಷಿಸುತ್ತಿದ್ದರು.

ತಮ್ಮ ಬಿಡುವಿನ ವೇಳೆಯನ್ನು ಮೂವರೂ ಪರಸ್ಪರ ಚರ್ಚೆ, ವಿನೋದಗಳಲ್ಲಿ ಕಳೆಯುತ್ತಿದ್ದರು. ಕೆಲವು ಸಲ ಗಂಭೀರವಾಗಿ ಅಧ್ಯಾತ್ಮ, ಜೀವನ ಮೌಲ್ಯಗಳು, ಆದರ್ಶಗಳು ಮುಂತಾದವುಗಳ ಬಗ್ಗೆ ಚರ್ಚಿಸುತ್ತಿದ್ದರು.

ಒಮ್ಮೆ ಹೀಗೇ ಬಿಡುವಾಗಿ ಏನನ್ನೋ ಮಾತನಾಡುತ್ತಾ ಕುಳಿತಿರುವಾಗ ಹೆಣ್ಣಿನ ಆಕಾರವೊಂದು ಕಾಣಿಸಿತು. ನೋಡಲಾಗಿ ಅದ್ಭುತ ಸೌಂದರ್ಯವತಿಯಾಗಿ ಕಾಣಿಸಿದಳು. ಅವಳೂ ರಾಮನನ್ನು ನೋಡಿದಳು. ನೋಡಿದ ಕ್ಷಣವೇ ಅವನನ್ನು ಪ್ರೀತಿಸಿದಳು. ಹೇಗಾದರೂ ಅವನನ್ನು ಒಲಿಸಿಕೊಂಡು ಮದುವೆಯಾಗಬೇಕೆಂದು ಯೋಚಿಸಿದಳು.

ವಯ್ಯಾರದಿಂದ ಮೆಲ್ಲನೆ ಅವನನ್ನು ಸಮೀಪಿಸಿ, "ಸುಂದರ ಪುರುಷನೆ ನೀನಾರೆಂದು ನನಗೆ ತಿಳಿಯದು. ಆದರೆ ನಿನ್ನ ರೂಪ, ಸೌಂದರ್ಯಕ್ಕೆ ನಾನು ಮನ ಸೋತಿದ್ದೇನೆ. ನನ್ನನ್ನು ಮದುವೆಯಾಗು. ಕಾಡಿನಲ್ಲಿ ಹೀಗೇಕೆ ಜಡ ಋಷಿಗಳಂತೆ ಬಾಳುತ್ತ ನಿನ್ನ ವಯಸ್ಸು, ರೂಪವನ್ನು ಹಾಳು ಮಾಡಿಕೊಳ್ಳುವೆ. ನನ್ನ ಸೌಂದರ್ಯವನ್ನು ನೋಡು. ನಿನಗೆ ನಾನು ಒಲಿದಿರುವುದೇ ನಿನ್ನ ಅದೃಷ್ಟ" ಎಂದಳು.

ಅವಳ ಮಾತಿಗೆ ಏನೆಂದು ಉತ್ತರಿಸಬೇಕೊ ತಿಳಿಯಲಿಲ್ಲ. ಅವಳೇನೋ ಸೌಂದರ್ಯವತಿಯೇ! ಆದರೆ ಈ ಕಾಡಿನಲ್ಲಿ ಒಂಟಿಯಾಗಿ ಓಡಾಡುತ್ತಿರುವ ಇವಳು ಯಾರಿರಬಹುದು? ಎಂದು ಯೋಚಿಸಿದ. ಬಹುಶಃ ಇವಳು ರಾಕ್ಷಸ ಹೆಣ್ಣಾಗಿದ್ದರೂ ಇರಬಹುದೆಂದು ಅನುಮಾನಿಸಿ, ಅವಳಿಗೆ ಹೇಳಿದ, "ಸುಂದರಿ, ನೀನು ಪ್ರೀತಿಸಿರುವುದೇನೋ ಸರಿ. ಆದರೆ ನನಗೆ ಮದುವೆಯಾಗಿ ಹೆಂಡತಿಯಿದ್ದಾಳೆ. ಆದ್ದರಿಂದ ನಾನು ನಿನಗೆ ಸರಿ ಹೋಗಲಾರೆ. ನೋಡಲ್ಲಿ, ಆ ಜಗುಲಿಯ ಮೇಲೆ ನನ್ನ ತಮ್ಮ ಕುಳಿತಿದ್ದಾನೆ. ಅವನು ಒಂಟಿ. ಅವನಲ್ಲಿಗೆ ಹೋಗಿ ಕೇಳು" ಎಂದನು.

ಆ ಸುಂದರ ಹೆಣ್ಣು ಬೇರಾರೂ ಅಲ್ಲ; ರಾವಣನ ತಂಗಿ ಶೂರ್ಪನಖಿಯೇ ಆಗಿದ್ದಳು. ಕಾಮರೂಪಿಗಳಾಗಿದ್ದರಿಂದ, ರಾಕ್ಷಸರು ಬಯಸಿದ ರೂಪವನ್ನು ಪಡೆಯಬಲ್ಲವರಾಗಿದ್ದರು. ಶೂರ್ಪನಖಿಯೂ ಹಾಗೆ ಸುಂದರ ಹೆಣ್ಣಿನ ರೂಪದಲ್ಲಿ ಬಂದಿದ್ದಳು.

ಶೂರ್ಪನಖಿ ಲಕ್ಷ್ಮಣನ ಬಳಿಗೆ ಹೋಗಿ ಮದುವೆಯಾಗುವಂತೆ ಒತ್ತಾಯಿಸಿದಳು. ಲಕ್ಷ್ಮಣ ನಗುತ್ತಾ ಹೆಣ್ಣೇ! ನನ್ನಣ್ಣ ರಾಮನಿನ್ನೊಂದಿಗೆ ತಮಾಷೆಯಾಗಿ ಹೇಳಿದ್ದಾನೆ. ನೀನು ನೋಡಿದರೆ ಅಪ್ಸರೆಯಂತೆಯೂ ಶ್ರೀಮಂತರ ಮನೆಯವಳಂತೆಯೂ ಕಾಣಿಸುತ್ತಿರುವಿ. ನಾನೋ ರಾಮನಿಗೆ ಸೇವಕ; ಗುಲಾಮ! ಅಂಥವನನ್ನು ಹೇಗೆ ತಾನೆ ಮದುವೆಯಾಗಬಲ್ಲೆ?" ಎಂದು, ಮೆಲ್ಲಗೆ ಅವಳನ್ನು ಅಲ್ಲಿಂದ ಕಳಿಸಿಬಿಟ್ಟ.

ಮತ್ತೆ ಶೂರ್ಪನಖಿ ರಾಮನ ಬಳಿಗೆ ಬಂದಳು. ಈಗ ಸೀತೆ ರಾಮನ ಬದಿಯಲ್ಲೇ ನಿಂತಿದ್ದಳು. ಅವಳನ್ನು ದುರುಗುಟ್ಟಿ ನೋಡಿದಳು. ಮುಖ ಕಿವುಚಿ ದೊಡ್ಡ ದನಿಯಲ್ಲಿ, "ಓ! ಈ ಸಣಕಲು ಕ್ರಿಮಿ ನಿನ್ನ ಹೆಂಡತಿಯೇನು? ನಮ್ಮಿಬ್ಬರ ನಡುವೆ ಅಡ್ಡ ನಿಂತಿರುವ ಇವಳನ್ನು ಈ ಕ್ಷಣವೇ ಹೊಸಕಿ ಹಾಕುತ್ತೇನೆ. ನಂತೆ ಬಲವಂತದಿಂದಲಾದರೂ ನಿನ್ನನ್ನು ಮದುವೆಯಾಗುತ್ತೇನೆ. ಎಂದು ಅಬ್ಬರಿಸಿ ಸೀತೆಯ ಮೇಲೆ ಹಾಯ್ದಳು. ಸೀತೆಯು ಭಯದಿಂದ ಚೀರಿದಳು. ಲಕ್ಷ್ಮಣ ಅಪಾಯವನ್ನು ಗ್ರಹಿಸಿ ಕೂಡಲೇ ಓಡಿಬಂದು ಆ ಹೆಣ್ಣಿನ ಹಿಡಿತದಿಂದ ಸೀತೆಯನ್ನು ಬಿಡಿಸಿ, ಸುಂದರಿಯ ಮೂಗನ್ನು ತರಿದ. ಕೂಡಲೇ ನೋವಿನಿಂದ ಚೀರಿಡುತ್ತ ತನ್ನ ರಾಕ್ಷಸರೂಪದಲ್ಲಿ ಪ್ರಕಟವಾದಳು. ಕೋಪಾವೇಶದಿಂದ ಅವರ ಕಡೆಗೆ ನೋಡುತ್ತಾ, "ನನಗೆ ಈ ಗತಿ ಕಾಣಿಸಿದ ನಿಮ್ಮ ಗತಿ ಏನಾಗುವುದೋ ನೋಡುತ್ತಿರಿ. ನನ್ನಣ್ಣ ತ್ರಿಲೋಕಾಧಿಪತಿ ರಾವಣ. ನಿಮಗೆ ಶಿಕ್ಷೆ ಮಾಡುವನು." ಬೆದರಿಕೆ ಹಾಕಿ ಅಲ್ಲಿಂದ ಓಡಿ ಹೋದಳು. ಸೀತೆ ಇದನ್ನೆಲ್ಲಾ ನೋಡಿ ನಡುಗಿದಳು. ಮುಂದೇನಾಗುವುದೋ ಎಂದು ಭಯಭೀತಳಾದಳು.

ಶೂರ್ಪನಖಿ ಅಲ್ಲಿಂದ ಓಡುತ್ತ ತನ್ನ ಸೋದರರಾದ ಖರ, ದೂಷಣರ ಬಳಿಗೆ ಬಂದು ತನ್ನ ಸ್ಥಿತಿಯನ್ನು ತೋರಿ, ಎಲ್ಲವನ್ನೂ ವಿವರಿಸಿದಳು. ಕೋಪದಿಂದ, "ಅಣ್ಣಂದಿರೇ ನೋಡಿದಿರಾ ನನಗಾದ ಗತಿ, ನಿಮ್ಮ ಪ್ರೀತಿಯ ತಂಗಿ ಇಷ್ಟೆಲ್ಲಾ ಅವಮಾನ ಅನುಭವಿಸುತ್ತಿರುವಾಗ ನೀವೇನು ಮಾಡುತ್ತಿದ್ದೀರಿ? ಈ ಕಾಡಿನ ಸಾಮ್ರಾಜ್ಯಕ್ಕೆ ಅಧಿಪತಿಗಳಾಗಿರುವಾಗ, ನಿಮ್ಮ ತಂಗಿಯ ಸ್ಥಿತಿಗೆ ನಾಚಿಕೆಯಾಗುವುದಿಲ್ಲವೇ? ನಿಮ್ಮ ಪೌರುಷಕ್ಕೆ ಏನಾಯಿತು? ಕೇವಲ ಇಬ್ಬರು ಮಾನವ ಹುಳುಗಳಿಂದ ನನಗೀ ಸ್ಥಿತಿಯೇ? ನೀವು ನಿಜವಾಗಿ ನಿಮ್ಮ ತಂಗಿಯನ್ನು ಪ್ರೀತಿಸುವುದಾದರೆ, ನಿಮ್ಮಲ್ಲಿ ಇನ್ನೂ ಪೌರುಷ ಉಳಿದಿದ್ದರೆ, ಈ ಕೂಡಲೇ ಹೋಗಿ ಅವರನ್ನು ಮುಗಿಸಿ ಬನ್ನಿ" ಎಂದು ಅವರನ್ನು ಅವರ ಪೌರುಷವನ್ನು ಕೆಣಕಿದಳು.

ಖರ, ದೂಷಣರು ಇದರಿಂದ ಪ್ರಚೋದಿತರಾಗಿ ಕೂಡಲೇ ಸೀತಾ, ರಾಮ, ಲಕ್ಷ್ಮಣರಿದ್ದ ಕುಟೀರದ ಕಡೆಗೆ ಓಡಿದರು. ಇದಕ್ಕೂ ಮೊದಲೇ ರಾಮ, ಲಕ್ಷ್ಮಣರು ಮುಂದಾಗುವುದನ್ನು ಊಹಿಸಿ, ನಿರೀಕ್ಷಿಸಿದ್ದರು. ರಾಮ, ಲಕ್ಷ್ಮಣ, ಸೀತೆಯರನ್ನು ಬೇರೆಡೆಗೆ ಕಳಿಸಿ, ಎದುರಾಳಿಗಳನ್ನು ಎದುರಿಸಲು ಸಿದ್ಧನಾಗಿ ನಿಂತಿದ್ದ. ನಿರೀಕ್ಷಿಸಿದಂತೆ, ಖರ, ದೂಷಣರು ತಮ್ಮ ಸೈನ್ಯದೊಂದಿಗೆ ಎದುರಿಗೆ ಬಂದು ನಿಂತರು.

ರಾಮ ಮತ್ತು ರಾಕ್ಷಸರ ನಡುವೆ ಭಯಂಕರ ಯುದ್ಧವಾಯಿತು. ತನ್ನೆಲ್ಲ ಶಕ್ತಿ, ಸಾಮರ್ಥ್ಯಗಳಿಂದ ಅವರೊಡನೆ ಹೋರಾಡಿದ. ರಾಕ್ಷಸರು ಎಷ್ಟೆ ಪ್ರಯತ್ನ, ಪೌರುಷಗಳಿಂದ ಹೋರಾಡಿದರೂ ರಾಮನ ಮುಂದೆ ನಿಲ್ಲಲಾಗಲಿಲ್ಲ. ರಾಕ್ಷಸ ಸೈನ್ಯ ಪೂರ್ತಿಯಾಗಿ ಸೋಲನ್ನು ಅನುಭವಿಸಿತು. ಖರ, ದೂಷಣ, ತ್ರಿಶಿರಾದಿ ರಾಕ್ಷಸ ಪ್ರಮುಖರು ರಾಮನಿಂದ ಹತರಾದರು. ಅದು ಹೇಗೋ ಅಕಂಪನನೆಂಬ ರಾಕ್ಷಸ ಮುಖ್ಯನೊಬ್ಬನು ತಪ್ಪಿಸಿಕೊಂಡು ಹೋಗಿ ತಲೆಮರೆಸಿಕೊಂಡಿದ್ದು ನಂತರ ರಾವಣನಲ್ಲಿಗೆ ಹೋದ.

ರಾವಣನಿಗೆ, ಅಕಂಪನ ನಡೆದದ್ದೆಲ್ಲವನ್ನೂ ತಿಳಿಸಿದ. ಅಷ್ಟು ದೊಡ್ಡ ರಾಕ್ಷಸ ಸೈನ್ಯವನ್ನು ಒಂಟಿಯಾಗಿ ಎದುರಿಸಿ ಸೋಲಿಸಿದ್ದೇ ಅಲ್ಲದೆ ಖರ, ದೂಷಣ, ತ್ರಿಶಿರರನ್ನು ಕೊಂದ ಅದ್ಭುತ ಪರಾಕ್ರಮವನ್ನು ಬಣ್ಣಿಸಿದ.

ಇದೆಲ್ಲವನ್ನು ಕೇಳಿದ ರಾವಣ ಈ ಕೂಡಲೇ ಅವರ ಮೇಲೆ ಯುದ್ಧ ಮಾಡುವುದಾಗಿ ಕೋಪದಿಂದ ಗುಡುಗಿ ಘೋಷಿಸಿದ. ಆದರೆ ಅಕಂಪನ "ಅರಸನೇ ಸ್ವಲ್ಪ ತಾಳ್ಮೆ ಇರಿಸಿಕೋ, ಶಾಂತನಾಗು. ನೀನು ಅಂದು ಕೊಂಡಂತೆ ಅವನನ್ನು ಸೋಲಿಸುವುದು, ಸಾಯಿಸುವುದು ಅಷ್ಟು ಸುಲಭವಲ್ಲ. ನೇರ ಯುದ್ಧದಿಂದ ಅವನನ್ನು ಗೆಲ್ಲಲಾರೆ. ಅವನನ್ನು ಕೊಲ್ಲಲು ಒಂದೆ ಒಂದು ಸುಲಭ ಉಪಾಯವಿದೆ. ರಾಮನಿಗೆ ಅನುಪಮ ಸುಂದರಿಯಾದ ಹೆಂಡತಿಯಿದ್ದಾಳೆ. ವಿಶ್ವದಲ್ಲೇ ಅವಳಿಗೆ ಸಾಟಿಯಾದ ರೂಪವತಿ ಮತ್ತೊಬ್ಬಳು ಇರಲು ಸಾಧ್ಯವಿಲ್ಲ. ಅವಳೆಂದರೆ ರಾಮನಿಗೆ ಪಂಚಪ್ರಾಣ. ಆದ್ದರಿಂದ ನೀನು ಅವಳನ್ನು ಕದ್ದು, ಹೊತ್ತು ತಂದರೆ ಅವಳ ಅಗಲಿಕೆಯ ನೋವಿನಿಂದ ತನಗೆ ತಾನೇ ಸಾವನ್ನಪ್ಪುತ್ತಾನೆ" ಎಂದು ಮಹತ್ತರ ಉಪಾಯವೊಂದನ್ನು ಸೂಚಿಸಿದನು.

ಅಕಂಪನನ ಸಲಹೆ ರಾವಣನಿಗೆ ಹಿಡಿಸಿತು. ಅವನಿಗೆ ಕೃತಜ್ಞತೆ ಹೇಳಿ ಹೊರಟ.

ಮಾರನೆ ದಿನ ತನ್ನ ಆಲೋಚನೆಯನ್ನು ಕಾರ್ಯಗತಗೊಳಿಸಲು ಹೊರಡುವುದಕ್ಕೆ ಮೊದಲು ತನ್ನ ಮಾವನಾದ ಮಾರೀಚನನ್ನು ಕಂಡು, ವಿವರಿಸಿ ಸಲಹೆ ಕೇಳಿದ.

ಮಾರೀಚ ಗಮನವಿಟ್ಟು ರಾವಣ ಹೇಳಿದ್ದೆಲ್ಲವನ್ನೂ ಕೇಳಿಸಿಕೊಂಡ. ನಂತರ, "ನೀನು ಆಲೋಚಿಸಿರುವ ಉಪಾಯ ಎಂಥದ್ದೆಂಬುದು ನಿನಗೆ ಅರ್ಥವಾಗಿದೆಯೇ? ಈ ಆಲೋಚನೆಗೆ ಸಲಹೆ ಕೊಟ್ಟವರು ಯಾರು? ನೀನೀಗ ಮಾಡಬೇಕೆಂದಿರುವ ಕೆಲಸದ ಪರಿಣಾಮಗಳ ಬಗ್ಗೆ ಯೋಚಿಸಿದ್ದೀಯಾ? ಸರಿಯಾದ ಯೋಚನೆ ಮಾಡದೆ ಮುಂದಾದರೆ ನಿನ್ನ ವಿನಾಶ ಖಂಡಿತ ಎಂಬುದನ್ನು ಮರೆಯಬೇಡ" ಎಂದು ಎಚ್ಚರಿಕೆಯ ಮಾತುಗಳನ್ನು ಹೇಳಿದ.

ಮಾರೀಚನ ಮಾತುಗಳನ್ನು ಕೇಳಿದ ಮೇಲೆ, ಅವನು ಹೇಳಿದ್ದು ಸರಿಯೆನಿಸಿತು. ಆತುರದಲ್ಲಿ ಮಾಡ ಹೊರಟು ವಿನಾ ಕಾರಣ ವಿನಾಶವನ್ನೇಕೆ ತಂದುಕೊಳ್ಳಬೇಕೆಂದು ಸುಮ್ಮನಾದ.

ಒಂದು ದಿನ ಮಂತ್ರಿಗಳಿಂದ ಸುತ್ತುವರೆದು ಕುಳಿತಿರುವಾಗ ಶೂರ್ಪನಖಿ ಧಾವಿಸಿ ಬಂದು ಒಳನುಗ್ಗಿದಳು. ಇಲ್ಲಿಯೂ ಅಣ್ಣನ ಮುಂದೆ ಇನ್ನೂ ಘಾಯಗೊಂಡು ರಕ್ತ ಸೋರುತ್ತಿದ್ದ ಮೂಗನ್ನು ಕೈಯಿಂದ ಮುಚ್ಚಿ ಹಿಡಿದು ನೋವಿನಿಂದ ನರಳುತ್ತ ರಾವಣನ ಮುಂದೆ ನಿಂತು ಅವನನ್ನು ಕೆರಳಿಸುವಂತೆ ಮಾತನಾಡಿದಳು.

"ಏನು ಮಾಡುತ್ತಿರುವಿಯಣ್ಣ, ನಿನ್ನ ವಿನಾಶ ಹತ್ತಿರದಲ್ಲಿಯೇ ಸುಳಿದಾಡುತ್ತಿರುವಾಗ ರಾಜಭೋಗದಲ್ಲಿ ಮೈಮರೆತು ಕುಳಿತಿದ್ದೀಯಾ? ನಿನ್ನ ಸೋದರರಾದ ಖರ, ದೂಷಣರು, ಹದಿನಾಲ್ಕು ಸಾವಿರ ಸೈನಿಕರು ಸಾವನ್ನಪ್ಪಿದ್ದಾರೆ. ನಿನ್ನ ತಂಗಿಯಾದ ಈ ಶೂರ್ಪನಖಿ ಭರಿಸಲಾಗದ ಅವಮಾನಕ್ಕೆ, ಅನ್ಯಾಯಕ್ಕೆ ಗುರಿಯಾಗಿದ್ದಾಳೆ. ಆದರೆ ನೀನು ಮಾತ್ರ ತಣ್ಣಗೆ ಏನೂ ಆಗದವನಂತೆ ಕುಳಿತಿದ್ದೀಯ. ನೀನೊಬ್ಬ ದೊಡ್ಡ ಯೋಧನೆಂದು ಬೀಗುತ್ತಿದ್ದೀಯ?"

ಶೂರ್ಪನಖಿಯ ಮಾತುಗಳು ಮುಳ್ಳಿನಂತೆ ಇರಿದವು. ಅವಳನ್ನು ಸಮಾಧಾನಪಡಿಸಿ, ಖಂಡಿತವಾಗಿಯೂ ಅವಳಿಗಾದ ಅನ್ಯಾಯ, ಅವಮಾನಗಳಿಗೆ ಪ್ರತೀಕಾರ ತೋರಿಸುವೆನೆಂದು ಭರವಸೆಯನ್ನು ಕೊಟ್ಟ, ರಾವಣನನ್ನು ಮತ್ತಷ್ಟು ಉದ್ರೇಕಿಸಲು ಮುಂದುವರೆದಳು.

"ಅಣ್ಣ ಇಷ್ಟಕ್ಕೂ ನಾನು ಅವರಿಗೆ ಮಾಡಿದ ದ್ರೋಹವಾದರೂ ಏನೆಂದು ಗೊತ್ತಾ? ಅವರಿಬ್ಬರೂ ಶೂರರು ಅಸಾಮಾನ್ಯರು. ಅದರಲ್ಲಿ ಎರಡು ಮಾತಿಲ್ಲ. ಅವರಲ್ಲಿ ಹಿರಿಯನಾದ ರಾಮನಿಗೆ ಅದ್ಭುತ ಸೌಂದರ್ಯವತಿ ಹೆಂಡತಿಯಿದ್ದಾಳೆ. ಅವಳ ಸೌಂದರ್ಯವನ್ನು ವರ್ಣಿಸಲು ನನ್ನಲ್ಲಿ ಮಾತಿಲ್ಲ. ಅಂತಹವಳು ರಾಮನಿಗೆ ಹೆಂಡತಿಯಾಗಿರುವುದಕ್ಕಿಂತ ನಿನ್ನಂತಹ ಸಾಮ್ರಾಟನ ರಾಣಿಯಾದರೆ ಚೆನ್ನಾಗಿರುತ್ತದೆ ಎಂದೆನಿಸಿ ಅವಳನ್ನು ನಿನಗಾಗಿ ಹೊತ್ತುಕೊಂಡು ಬರಲು ಪ್ರಯತ್ನಿಸಿದೆ. ಇದು ತಪ್ಪೇನು? ಇಷ್ಟಕ್ಕಾಗಿ ನನ್ನನ್ನು ಈ ರೀತಿ ಶಿಕ್ಷಿಸಬಹುದೇ?" ಎಂದು ತರಿದ ತನ್ನ ಮೂಗನ್ನು ತೋರಿಸಿದಳು.

ತಂಗಿಯ ವಿಕಾರವಾದ ಮೂಗನ್ನು ನೋಡಿದ ಮೇಲೆ ರಾವಣನಿಗೆ ಕೋಪ ತಡೆಯಲಾಗಲಿಲ್ಲ. ಅದರ ಜೊತೆಗೆ ಸೀತೆಯ ಸೌಂದರ್ಯದ

ವರ್ಣನೆ ಅವನನ್ನು ಹುಚ್ಚನನ್ನಾಗಿಸಿತ್ತು. ಮಾರೀಚನು ಹೇಳಿದ್ದ ಬುದ್ಧಿವಾದವನ್ನು ಮರೆತು ಬಿಟ್ಟ. ಮತ್ತೆ ಮಾರೀಚನಲ್ಲಿಗೆ ಸಹಾಯ ಯಾಚಿಸಲು ಹೋದ.

ಎರಡನೆ ಬಾರಿ ರಾವಣ ಬಂದದ್ದು ಮಾರೀಚನಿಗೆ ಆಶ್ಚರ್ಯವಾದರೂ ಅವನನ್ನು ಮಾಮೂಲಿನಂತೆ ಸ್ವಾಗತಿಸಿದ. ತನ್ನಿಂದ ಏನಾಗಬೇಕೆಂದು ವಿಚಾರಿಸಿದ. ರಾವಣ ಹೇಳಿದ, "ನೋಡು, ಈ ಮೊದಲು ನೀನು ಹೇಳಿದ ಮಾತನ್ನು ಗೌರವಿಸಿ, ಸೀತೆಯ ಅಪಹರಣದ ವಿಷಯದಲ್ಲಿ ಸುಮ್ಮನಿದ್ದೆ. ಆದರೆ ನನ್ನ ತಂಗಿ ಶೂರ್ಪನಖಿಯ ದುರವಸ್ಥೆಯನ್ನು ಕಣ್ಣಾರೆ ನೋಡಿದ ಮೇಲೆ ಇನ್ನು ಸುಮ್ಮನಿರಲು ಸಾಧ್ಯವಿಲ್ಲ. ತಂಗಿಯ ಅವಮಾನ, ಸೋದರರ ಸಾವು, ಸೈನ್ಯದ ಸೋಲು ಇವೆಲ್ಲವನ್ನು ನೋಡಿದ ಮೇಲೆ, ನಾನು ಮೊದಲು ಆಲೋಚಿಸಿದಂತೆ ಮಾಡಬೇಕೆಂದಿದ್ದೇನೆ."

ಮಾರೀಚ ಮತ್ತೊಮ್ಮೆ ರಾವಣನಿಗೆ ಬುದ್ಧಿ ಹೇಳಿ ಅವನ ಪ್ರಯತ್ನವನ್ನು ಬಿಡಲು ಕೇಳಿಕೊಂಡ. ಆದರೆ ರಾವಣ ಈಗ ಯಾರ ಮಾತನ್ನೂ ಯಾವ ಮಾತನ್ನೂ ಕೇಳುವ ಸ್ಥಿತಿಯಲ್ಲಿ ಇರಲಿಲ್ಲ. ಆದ್ದರಿಂದ ಮಾರೀಚನಿಗೆ ಈಗ ಅಧಿಕಾರವಾಣಿಯಿಂದ, "ನೋಡು ನಿನ್ನ ಬಳಿ ಅನೇಕ ಬಗೆಯ ಮಂತ್ರಶಕ್ತಿಗಳಿವೆ. ಅವುಗಳ ನೆರವಿನಿಂದ ನೀನು ಮಾಡಬೇಕಾದ್ದು ಇಷ್ಟೇ, ಮೈಮೇಲೆ ಬೆಳ್ಳಿ ಚುಕ್ಕೆಗಳಿರಿಸಿಕೊಂಡ ಚಿನ್ನದ ಜಿಂಕೆಯಾಗಿ ವೇಷಂತರ ಹೊಂದಿ ಸೀತೆಯ ಕುಟೀರದ ಸುತ್ತಮುತ್ತಲ ಪ್ರಾಂತ್ಯದಲ್ಲಿ ಓಡಾಡು. ನಿನ್ನ ಆ ರೂಪಕ್ಕೆ ಮರುಳಾಗಿ ಸೀತೆ ಅದನ್ನು ಹಿಡಿದುಕೊಡಲು ಬೇಡುತ್ತಾಳೆ. ಆ ಜಿಂಕೆಯನ್ನು ಹಿಡಿಯುವುದಕ್ಕಾಗಿ ಇಬ್ಬರೂ (ರಾಮ, ಲಕ್ಷ್ಮಣರು) ಅದರ ಬೆನ್ನು ಹತ್ತಿ ಹೊರಡುತ್ತಾರೆ. ಸೀತೆ ಕುಟೀರದಲ್ಲಿ ಒಬ್ಬಳೇ ಇರುತ್ತಾಳೆ. ನಾನು ಸಮಯ ನೋಡಿ ಅವಳನ್ನು ಹೊತ್ತು ಒಯ್ಯುತ್ತೇನೆ" ಎಂದು ತನ್ನ ಉಪಾಯವನ್ನು ವಿವರಿಸಿದ.

ಮಾರೀಚನಿಗೆ, ರಾವಣನನ್ನು ತಿದ್ದುವುದು, ಬುದ್ಧಿ ಹೇಳುವುದು, ಇನ್ನು ಸಾಧ್ಯವಿಲ್ಲವೆನಿಸಿತು. ವಿಧಿ ಅವನನ್ನು ಹೀಗೆ ಆಡಿಸುತ್ತಿರುವಾಗ

ತಾನು ತಾನೇ ಏನು ಮಾಡಲು ಸಾಧ್ಯವೆಂದು ಸುಮ್ಮನಾದ. ಅವನ ಹಣೆ ಬರಹಕ್ಕೆ ಅವನನ್ನು ಬಿಟ್ಟು ತಾನು ಮಾಡಬೇಕಾದ್ದನ್ನು ಯೋಚಿಸಿದ.

ಮಾರೀಚ ಕೂಡಲೇ ಚಿನ್ನದ ಜಿಂಕೆಯಾಗಿ ಮಾರ್ಪಟ್ಟ. ಕುಟೀರದ ಬಳಿಯಲ್ಲಿ ಸುಳಿದಾಡಿದ. ಒಂದು ಕ್ಷಣ ಕಂಡು ಕಾಣದಂತೆ ಮಿಂಚಿ ಮಾಯವಾಗುತ್ತಿದ್ದ ಜಿಂಕೆಯನ್ನು ಸೀತೆ ನೋಡಿದಳು. ಬೆರಗಿನಿಂದ ಕಣ್ಣರಳಿಸಿ ನೋಡುತ್ತಿದ್ದ ಅವನ ಕಣ್ಣಿನ ನೋಟ ಅದರ ಬೆನ್ನು ಹತ್ತಿತು. ಸೀತೆಯ ಕಣ್ಣು ಸರಿಯುತ್ತಿದ್ದ ಕಡೆ ರಾಮ, ಲಕ್ಷ್ಮಣರೂ ನೋಡಿದರು. ಅಷ್ಟರಲ್ಲಿ ಸೀತೆ ಸಂಭ್ರಮ, ಸಡಗರಗಳಿಂದ ಉದ್ಗರಿಸಿದಳು. "ಆರ್ಯಪುತ್ರ! ಅಲ್ಲಿ ನೋಡು ಎಷ್ಟು ಅಪರೂಪದ ದಿವ್ಯವಾದ ಜಿಂಕೆ! ನನಗದನ್ನು ತಂದು ಕೊಡುವೆಯಾ? ಅಯೋಧ್ಯೆಗೆ ಹೋದಾಗ ಅದನ್ನು ಎಲ್ಲರಿಗೂ ತೋರಿಸಬೇಕು" ಎಂದು ಅಂಗಲಾಚಿ ಬೇಡಿದಳು. ರಾಮ, ಲಕ್ಷ್ಮಣರಿಗೆ ಅದರ ಬಗ್ಗೆ ಅನುಮಾನವಿತ್ತು. ರಾಕ್ಷಸಮಾಯೆಯೆಂದೇ ಅವರಿಗನಿಸಿತು. ಆದರೂ ಸೀತೆಯ ಬಯಕೆಯನ್ನು ನಿರಾಕರಿಸುವುದು ಹೇಗೆ? ಎನಿಸಿ ಲಕ್ಷ್ಮಣನಿಗೆ ಹೇಳಿದ, "ಲಕ್ಷ್ಮಣಾ ನಾನು ಈ ಜಿಂಕೆಯ ಬೆನ್ನಟ್ಟಿ ಹೋಗುತ್ತೇನೆ. ಹೇಗಾದರೂ ಅದನ್ನು ತಂದು ಸೀತೆಗೆ ಉಡುಗೊರೆಯಾಗಿ ಕೊಡಬೇಕೆಂದಿದ್ದೇನೆ. ಆದ್ದರಿಂದ ನಾನು ಹೋಗಿ ಬರುವವರೆಗೆ ನಿನ್ನತ್ತಿಗೆಯನ್ನು ಜೋಪಾನವಾಗಿ ನೋಡಿಕೋ. ಯಾವುದಕ್ಕೂ ಅವಳನ್ನು ಒಬ್ಬೊಂಟಿಯಾಗಿ ಬಿಡಬೇಡ."

ಲಕ್ಷ್ಮಣನಿಗೆ ಸುಮ್ಮನಿರಲಾಗಲಿಲ್ಲ, "ಅಣ್ಣ, ನೀನೂ ಅತ್ತಿಗೆಯಂತೆ ಅದನ್ನು ನಿಜವಾದ ಜಿಂಕೆಯೆಂದೇ ಭಾವಿಸಿರುವೆಯಲ್ಲ. ಪ್ರಪಂಚದಲ್ಲಿ ಎಲ್ಲಿಯಾದರೂ ಬೆಳ್ಳಿ ಚುಕ್ಕಿ, ಚಿನ್ನದ ಮೈಯ್ಯಿನ ಅಪರೂಪದ ಜಿಂಕೆಯನ್ನು ಕಂಡಿರುವೆಯಾ? ಇದು ರಾಕ್ಷಸ ಮಾಯೆ ಎಂಬುದಂತೂ ಖಂಡಿತ. ಅದರ ಬೆನ್ನು ಹತ್ತುವುದು ಬೇಡ" ಎಂದು ಹೇಳಿದ.

"ಲಕ್ಷ್ಮಣಾ, ಇಷ್ಟು ವರ್ಷಗಳೂ ವನವಾಸದ ಕಷ್ಟಗಳನ್ನು ಅನುಭವಿಸುತ್ತಿದ್ದರೂ, ತನಗೆ ಇದು ಬೇಕು ಅದು ಬೇಕು ಎಂದು ಒಮ್ಮೆಯಾದರೂ ನಿನ್ನ ಅತ್ತಿಗೆ ಏನನ್ನಾದರೂ ಬೇಡಿದ್ದುಂಟೆ? ಅದಕ್ಕಾ



ಗಿಯೇ, ಅವಳ ಮನಸ್ಸಂತೋಷಕ್ಕಾಗಿಯೇ ಎಷ್ಟೇ ಕಷ್ಟ ಬಂದರೂ ಈ ಆಸೆಯನ್ನು ಪೂರೈಸಬೇಕೆಂದಿದ್ದೇನೆ. ದಯವಿಟ್ಟು ತಡೆಯಬೇಡ" ಎಂದು ಹೇಳುತ್ತಾ ಬಿಲ್ಲು ಬಾಣ ಹಿಡಿದು ಹೊರಟೇ ಬಿಟ್ಟ.

ತನ್ನನ್ನು ಬೆನ್ನಟ್ಟಿ ಬಂದ ಜಿಂಕೆ ರಾಮನನ್ನು ಅಡ್ಡಾಡಿಸಿತು. ಕಂಡಂತೆ ಕಂಡು ಮಾಯವಾಗುತ್ತಿತ್ತು. ಏನು ಮಾಡಿದರೂ ಅದನ್ನು ಜೀವಂತ ಹಿಡಿಯಲು ಸಾಧ್ಯವಾಗಲಿಲ್ಲ. ಕಡೆಗೆ ಬೇಸತ್ತು ಅದಕ್ಕೆ ಬಾಣವನ್ನು ಗುರಿಯಿಟ್ಟು ಹೊಡೆದ. ಬಾಣ ತಗುಲಿದ್ದೇ ಆ ಮಾಯಾ ಜಿಂಕೆ ಪೂರ್ವರೂಪದ ಮಾರೀಚನಾಗಿ ಕೆಳಗೆ ಬಿದ್ದ. ಆದರೆ ಕೆಳಗೆ ಬೀಳುವಾಗ ರಾಮನ ದನಿಯನ್ನು ಅನುಕರಿಸಿ 'ಹಾ ಲಕ್ಷ್ಮಣ! ಹಾ ಸೀತೆ!' ಎಂದು ಕೂಗಿದ.

ಲಕ್ಷ್ಮಣ, ಸೀತೆಯರು ಈ ಆರ್ತಸ್ವರನ್ನು ಕೇಳಿದರು. ಸೀತೆಯಂತು, ರಾಮನಿಗೆ ಏನಾಯಿತೊ ಎಂದು ಹೆದರಿಸಿದಳು. "ಲಕ್ಷ್ಮಣಾ ನಿನ್ನ ಅಣ್ಣ ಆಪತ್ತಿನಲ್ಲಿ ಸಿಲುಕಿದಂತಿದೆ. ಕೂಡಲೇ ಹೊರಟು ನಿನ್ನಣ್ಣನನ್ನು ರಕ್ಷಿಸು" ಎಂದು ದುಃಖದಿಂದ ಹೇಳಿದಳು.

"ಅತ್ತಿಗೆ ನಿಜವಾಗಿಯೂ ಇದು ನನ್ನಣ್ಣನ ದನಿಯಲ್ಲ. ನನ್ನ ಅಣ್ಣನಿಗೆ ಹಾನಿ ಮಾಡಲು ಪ್ರಪಂಚದಲ್ಲಿ ಯಾರಿಗೂ ಸಾಧ್ಯವಿಲ್ಲ. ತನ್ನನ್ನು ತಾನು

ರಕ್ಷಿಸಿಕೊಳ್ಳಬಲ್ಲ ಸಾಮರ್ಥ್ಯ ನನ್ನ ಅಣ್ಣನಿಗಿದೆ" ಎಂದು ಧೈರ್ಯದ ಮಾತನ್ನು ಲಕ್ಷ್ಮಣನು ಹೇಳಿದ.

ಸೀತೆಗೆ ಲಕ್ಷ್ಮಣನ ಮಾತುಗಳಲ್ಲಿ ಭರವಸೆ ಉಂಟಾಗಲಿಲ್ಲ. ಅಲ್ಲದೆ ಅವನು ದುರುದ್ದೇಶದಿಂದ ಈ ರೀತಿ ಸಮಾಧಾನ ಹೇಳುತ್ತಿದ್ದಾನೆ. ಅಣ್ಣನ ಸಹಾಯಕ್ಕೆ ಹೋಗುವುದು ಅವನಿಗೆ ಇಷ್ಟವಿಲ್ಲ ಎನಿಸಿ ನಿಷ್ಠುರವಾಗಿ ಅವನನ್ನು ಹಲವು ರೀತಿಗಳಲ್ಲಿ ನಿಂದೆಯ ಮಾತುಗಳನ್ನು ಆಡಿದಳು. ಲಕ್ಷ್ಮಣನಿಗೆ ಅವಳ ಮಾತುಗಳು ತೀರಾ ಕೆಡುಕೆನಿಸಿತು. ತನ್ನ ಚಾರಿತ್ರ್ಯದ ಬಗ್ಗೆಯೇ ಅನುಮಾನ ತೋರಿದಂತಿತ್ತು. ಹೋಗಲು ಮನಸ್ಸಿಲ್ಲದಿದ್ದರೂ ಅವಳ ಕ್ರೂರವಾದ ನಿಂದೆಯಿಂದ ತಪ್ಪಿಸಿಕೊಳ್ಳಲು ಹೊರಡಲು ಸಿದ್ಧನಾದ. ಆದರೆ ಹೋಗುವುದಕ್ಕೆ ಮೊದಲು ಕುಟೀರದ ಮುಂದೆ ಮೂರು ಗೆರೆಗಳನ್ನು ಎಳೆದು, "ಅತ್ತಿಗೆ, ಅಣ್ಣನ ಸಾಮರ್ಥ್ಯದ ಬಗ್ಗೆ ನಂಬಿಕೆಯಿಲ್ಲದೆ, ನನ್ನ ಚಾರಿತ್ರ್ಯವನ್ನೂ ಶಂಕಿಸಿ ಹೋಗಲು ಒತ್ತಾಯಿಸಿದ್ದೀರಿ. ಹೋಗುತ್ತೇನೆ, ನಿಮ್ಮ ಮಾತಿನಂತೆ. ಆದರೆ! ಯಾವುದೇ ಕಾರಣಕ್ಕೂ ಯಾರೇ ಬಂದರೂ ಈ ಗೆರೆಗಳನ್ನು ದಾಟಿ ಬರಬೇಡಿ" ಎಂದು ಹೇಳಿ ಹೊರಟನು.

ಲಕ್ಷ್ಮಣ ಅಲ್ಲಿಂದ ಹೊರಟ ಸ್ವಲ್ಪ ಹೊತ್ತಿಗೆ, ಅವಿತು ಕುಳಿತಿದ್ದ ರಾವಣ ಸಂನ್ಯಾಸಿ ವೇಷದಲ್ಲಿ ಕುಟೀರದ ಮುಂದೆ ಪ್ರತ್ಯಕ್ಷನಾದ. 'ಭವತಿ ಭಿಕ್ಷಾಂ ದೇಹಿ' ಎಂದು ಕೂಗಿದ. ಒಳಗಿದ್ದ ಸೀತೆ ಬಾಗಿಲಲ್ಲಿ ನಿಂತು ಸಂನ್ಯಾಸಿಯನ್ನು ನೋಡಿ ಮತ್ತೆ ಒಳಹೊಕ್ಕು ಹಣ್ಣು ಹಂಪಲುಗಳನ್ನು ತಂದು ಜೋಳಿಗೆ ನೀಡಿರೆಂದು ಪ್ರಾರ್ಥಿಸಿದಳು. ಹೊರಗೆ ಬಂದು ಭಿಕ್ಷೆ ನೀಡದಿದ್ದಲ್ಲಿ ತಾನು ಸ್ವೀಕರಿಸುವುದಿಲ್ಲವೆಂದು ಸಿಟ್ಟಿನಿಂದ ಹೇಳಿದಾಗ, ಸೀತೆಗೆ ದಿಕ್ಕೇ ತೋಚಲಿಲ್ಲ. ಲಕ್ಷ್ಮಣನ ಎಚ್ಚರಿಕೆಯ ಮಾತುಗಳು ನೆನಪಾದವು. ಆದರೂ ಸಂನ್ಯಾಸಿಗಳಿಂದ ತನಗೇನೂ ಅಪಾಯವಿರಲಾರದೆಂದು ಭಾವಿಸಿ, ಗೆರೆಗಳನ್ನು ದಾಟಿ ಹೊರಗೆ ಹೆಜ್ಜೆಯಿಟ್ಟಳು. ಕೂಡಲೇ ಸಂನ್ಯಾಸಿ ರಾವಣನಾಗಿ ಮಾರ್ಪಟ್ಟು ತನ್ನ ಪರಿಚಯ ಹೇಳಿ, ತನ್ನನ್ನು ಮದುವೆಯಾಗೆಂದು ಪೀಡಿಸಿದ. ಸೀತೆ ಭಯದಿಂದ ಕೂಗಿಕೊಂಡಳು. ರಾವಣ ಅವಳನ್ನು ಹಿಡಿದೆಳೆದು ತನ್ನ ವಿಮಾನದಲ್ಲಿ ಕೂರಿಸಿಕೊಂಡು ಮೇಲಕ್ಕೆ ಜಿಗಿದ.

ಅನಿರೀಕ್ಷಿತವಾಗಿ ಎದುರಾದ ಈ ಸಂದರ್ಭದಲ್ಲಿಯೂ ಸೀತೆ ಸ್ವಲ್ಪ ಧೈರ್ಯವನ್ನು ತಂದುಕೊಂಡು ಪ್ರತಿಭಟಿಸಲು ಪ್ರಯತ್ನಿಸಿದಳು. "ರಾವಣ! ನೀನು ಲಂಕಾಧಿಪತಿಯೇ ಆಗಿರಬಹುದು. ಆದರೆ ನೀನು ಪರಸ್ತ್ರೀಯಾದ ನನ್ನ ಮೇಲೆ ಈ ರೀತಿಯ ದೌರ್ಜನ್ಯಕ್ಕೆ ಇಳಿದು ಅಪರಾಧ ಮಾಡಿದ್ದೀಯ; ಪಾಪ ಮಾಡಿದ್ದೀಯ. ಚಕ್ರವರ್ತಿ ಎನಿಸಿಕೊಂಡ ನಿನಗೆ ಈಗ ಮಾಡುತ್ತಿರುವ ಈ ಕಾರ್ಯ ಉಚಿತವಲ್ಲ. ಮರ್ಯಾದೆಯಿಂದ ನನ್ನನ್ನು ಬಿಟ್ಟುಬಿಡು. ಇಲ್ಲವಾದಲ್ಲಿ ನನ್ನ ಗಂಡ ಮೈದುನರು ನಿನ್ನನ್ನು ನಿನ್ನ ಲಂಕೆಯನ್ನು ಸುಮ್ಮನೆ ಬಿಡುವುದಿಲ್ಲ. ವಿನಾಕಾರಣ ವಿನಾಶವನ್ನು ತಂದುಕೊಳ್ಳಬೇಡ" ಎಂದು ದಿಟ್ಟವಾಗಿ ಬುದ್ಧಿ ಹೇಳಲು ಮುಂದಾದಳು. ರಾವಣನಿಗೆ ಇದೇನೂ ಕಿವಿಗೆ ಹೋದಂತೆ ಕಾಣಿಸಲಿಲ್ಲ.

"ಸುಮ್ಮನೆ ಗಳುಹುವೆಯೇಕೆ ಸುಂದರಿ! ಈ ಚಕ್ರವರ್ತಿ ರಾವಣನನ್ನು ವರಿಸಲು ಸಾವಿರಾರು ಹೆಣ್ಣುಗಳು ಸಾಲುಗಟ್ಟಿ ನಿಂತಿದ್ದಾರೆ. ಅಂಥಾದ್ದರಲ್ಲಿ ನಾನೇ ಒಲಿದು ಬಂದು ನಿನ್ನನ್ನು ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳುತ್ತೇನೆಂದರೆ ಆ ವನವಾಸಿಗಳ ಬಗ್ಗೆ ಬಹಳ ಹೆಮ್ಮೆಯಿಂದ ಹೇಳಿಕೊಳ್ಳುತ್ತಿರುವೆಯಲ್ಲ. ಸುಮ್ಮನೆ ನನ್ನೊಡನೆ ಸಹಕರಿಸು" ಎಂದನು.



ಸೀತೆಗೆ ಇನ್ನೇನು ಮಾಡಲೂ ತೋಚದೆ, "ಆರ್ಯಪುತ್ರ, ಲಕ್ಷ್ಮಣಾ ಎಲ್ಲಿದ್ದೀರಿ? ದುಷ್ಟ ರಾವಣ ನನ್ನನ್ನು ಕೊಂಡೊಯ್ಯುತ್ತಿದ್ದಾನೆ. ಕಾಪಾಡುವವರು ಯಾರೂ ಇಲ್ಲವೇ?" ಎಂದು ಆರ್ತವಾಗಿ ಕೂಗಿಕೊಂಡಳು. ಮರ, ಗಿಡ, ಬಳ್ಳಿಗಳನ್ನೆಲ್ಲಾ ಸಹಾಯಕ್ಕೆ ಬೇಡಿದಳು. ಅವಳ ಅರ್ತಸ್ವರ ದಟ್ಟ ಕಾಡಿನಲ್ಲಿ ಎಲ್ಲೆಡೆ ಅನುರಣಿಸಿತು.

ಅದೇ ಸಂದರ್ಭದಲ್ಲಿ ಪಕ್ಷಿರಾಜ ಜಟಾಯು ಅರೆನಿದ್ದೆಯಲ್ಲಿದ್ದ. ಅವನ ಕಿವಿಗೆ ಈ ಆರ್ತ ಸ್ವರ ಕೇಳಿಸಿತು. ಕಣ್ಣು ಬಿಟ್ಟು ನೋಡಿದಾಗ ಪುಷ್ಪಕ ವಿಮಾನವು ಹಾರಿ ಹೋಗುತ್ತಿದ್ದುದು ಕಾಣಿಸಿತು. ಅವಳ ದನಿಯಿಂದ ಸೀತೆ ಎಂಬುದು ಜಟಾಯುವಿಗೆ ತಿಳಿಯಿತು. ರಾವಣನನ್ನು ಅಡ್ಡಗಟ್ಟಿದ. "ರಾವಣ ನಿಲ್ಲು. ನನು ಪಕ್ಷಿರಾಜ ಜಟಾಯು. ರಾಜನಾಗಿದ್ದು ಇಂಥ ಹೇಯ ಕೃತ್ಯವನ್ನು ಮಾಡಲು ನಾಚಿಕೆಯಿಲ್ಲವೇ? ಬಿಟ್ಟು ಬಿಡು. ಇಲ್ಲವಾದಲ್ಲಿ ನಾಶ ಹೊಂದುವೆ. ನೋಡು ನನಗೆ ವಯಸ್ಸಾಗಿದೆ. ಆದರೂ ನಿನ್ನನ್ನು ಎದುರಿಸಿ ಪ್ರಿಯ ಗೆಳೆಯ ದಶರಥನ ಸೊಸೆಯನ್ನು ಕಾಪಾಡುತ್ತೇನೆ" ಎಂದು ರಾವಣನ ಮೇಲೆ ಯುದ್ಧಕ್ಕೆ ನಿಂತ. ಸಾಕಷ್ಟು ಹೊತ್ತು ಹೋರಾಡಿದ. ಆದರೆ ಬಲ, ಪರಾಕ್ರಮಗಳಲ್ಲಿ ರಾವಣನನ್ನು ಗೆಲ್ಲಲಾಗಲಿಲ್ಲ. ರಾವಣ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿದ್ದೇ, ಜಟಾಯು ನೆಲಕ್ಕೆ ಬಿದ್ದ. ಪೂರ್ತಿಯಾಗಿ ರಕ್ತದಲ್ಲಿ ಮುಳುಗಿದ್ದ. ಸೀತೆಗೆ ದುಃಖ ತಡೆಯಲಾಗಲಿಲ್ಲ. ರಾವಣ ನೇರವಾಗಿ ಲಂಕೆಯ ಕಡೆ ಹಾರಿದ.

ಇತ್ತ ಕಾಡಿನಲ್ಲಿ ರಾಮ ಹೆದರಿದ. ಮಾರೀಚ ತನ್ನನ್ನು ಅನುಕರಿಸಿ ಕೂಗಿದ್ದರಿಂದ ಲಕ್ಷ್ಮಣ ಭಯಗೊಂಡು ಸೀತೆಯನ್ನು ಒಂಟಿಯಾಗಿ ಉಳಿಸಿ ಎಲ್ಲಿ ತನ್ನ ಸಹಾಯಕ್ಕೆ ಬರುವನೋ! ಸೀತೆಗೆ ರಾಕ್ಷಸರಿಂದ ಏನು ಅಪಾಯವೋ! ಎಂದು ಹಲವು ಬಗೆಯ ಶಂಕೆಗಳಿಗೆ ಒಳಗಾಗಿದ್ದ. ಆದ್ದರಿಂದ ಆದಷ್ಟು ಬೇಗ ಕುಟೀರವನ್ನು ತಲುಪಬೇಕೆಂದು ಬರುತ್ತಿದ್ದ.

ರಾಮನ ಶಂಕೆ ನಿಜವಾಯಿತು. ರಾಮನು ನಡೆದು ಬರುತ್ತಿದ್ದ ದಿಕ್ಕಿಗೆ ವಿರುದ್ಧವಾಗಿ ಲಕ್ಷ್ಮಣನೂ ಬರುತ್ತಿದ್ದ. ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ಅಣ್ಣ ಸುರಕ್ಷಿತವಾಗಿರುವುದನ್ನು ನೋಡಿ ಲಕ್ಷ್ಮಣನಿಗೆ

ಸಂತೋಷವಾಯಿತು. ಆದರೆ ಲಕ್ಷ್ಮಣ ಬಂದು ಬಿಟ್ಟಿದ್ದರಿಂದ ಒಬ್ಬಳೇ ಇರುವ ಸೀತೆಗೆ ಏನಾಗಿದೆಯೋ ಎಂದು ಹೆದರಿದ.

"ಲಕ್ಷ್ಮಣಾ, ನೀನೇಕೆ ಅತ್ತಿಗೆಯನ್ನು ಬಿಟ್ಟು ಹೊರಟು ಬಂದೆ? ಅವಳೊಬ್ಬಳನ್ನೇ ಬಿಡಬೇಡವೆಂದು ಹೇಳಿರಲಿಲ್ಲವೇ?" ಎಂದು ಆಕ್ಷೇಪದ ದನಿಯಲ್ಲಿ ಹೇಳಿದ.

ಲಕ್ಷ್ಮಣ ಈ ಪ್ರಶ್ನೆಗಳಿಗೆ ಉತ್ತರ ನೀಡುವ ಸ್ಥಿತಿಯಲ್ಲಿ ಇರಲಿಲ್ಲ. ಆದರೂ ವಿನಯದಿಂದ, "ಅಣ್ಣಾ ಕ್ಷಮಿಸಬೇಕು. ಅತ್ತಿಗೆಯನ್ನು ಒಬ್ಬಳೇ ಬಿಟ್ಟು ಬರುವ ಉದ್ದೇಶ ನನಗೆ ಇರಲಿಲ್ಲ. ಓ ಲಕ್ಷ್ಮಣಾ! ಓ ಸೀತೆ ಎಂದು ನಿಮ್ಮ ದನಿ ಕೇಳಿಸಿ ನೀವು ಆಪತ್ತಿನಲ್ಲಿ ಇರಬೇಕೆಂದು ಊಹಿಸಿ, ಹೆದರಿ ನಿಮ್ಮ ರಕ್ಷಣೆಗೆ, ಸಹಾಯಕ್ಕೆ ಹೋಗೆಂದು ಹಟ ಮಾಡಿದಳು. ನನ್ನಣ್ಣನಿಗೆ ಏನೂ ಆಗುವುದಿಲ್ಲ. ಅವರನ್ನು ಅವರೇ ರಕ್ಷಿಸಿಕೊಳ್ಳುತ್ತಾರೆ. ಇದೆಲ್ಲ ದಾರಿ ತಪ್ಪಿಸಲು ರಾಕ್ಷಸರು ಮಾಡುತ್ತಿರುವ ಕೆಲಸವೆಂದು ಎಷ್ಟೇ ಹೇಳಿದೂ ನನಗೆ ಕೆಟ್ಟ ಆಲೋಚನೆಗಳಿವೆಯೆಂದು ಅದಕ್ಕಾಗಿಯೇ ಹೋಗುತ್ತಿಲ್ಲವೆಂದು ನಿಷ್ಠುರವಾಗಿ ಹೇಳಲು ಬರಬೇಕಾಯಿತು. ನನ್ನ ಅಪರಾಧ ಕ್ಷಮಿಸಿ" ಎಂದ.

ಸೀತೆ ಮಾಡಿದ ಅಪರಾಧ ಎಂಥ ಭಯಂಕರ! ತನ್ನ ತಮ್ಮ ಲಕ್ಷ್ಮಣನ ಮೇಲೆ ಪೂರ್ತಿ ನಂಬಿಕೆಯಿರಿಸಿದ್ದ. ಅವನೆಂಥವನೆಂಬುದು ರಾಮನಿಗೆ ಗೊತ್ತು. ಸುಮ್ಮನಾದ.

ರಾಮ, ಲಕ್ಷ್ಮಣರಿಬ್ಬರೂ ಕಾತರ, ಕಳವಳ, ಆತಂಕಗಳಿಂದ ಕುಟೀರದ ಕಡೆಗೆ ಬೇಗ ಬೇಗ ಹೆಜ್ಜೆ ಹಾಕಿದರು.

ಕುಟೀರವನ್ನು ತಲುಪುತ್ತಿದ್ದಂತೆ ರಾಮ, ಸೀತೆಯ ಹೆಸರಿಡಿದು ಕೂಗಿದ. ಉತ್ತರವಿಲ್ಲ. ಕುಟೀರದ ಸುತ್ತಮುತ್ತಲೆಲ್ಲ ಓಡಾಡಿ ರಾಮ ಲಕ್ಷ್ಮಣರಿಬ್ಬರೂ ಸೀತೆಗಾಗಿ ಹುಡುಕಿದರು. ಎಲ್ಲಿಯೂ ಅವಳ ಸೂಚನೆಯಿಲ್ಲ. ಇಬ್ಬರೂ ಗಾಬರಿಯಿಂದ ಸ್ವಲ್ಪ ದೂರ ಕಾಡಿನಲ್ಲಿ ನಡೆದು ಬರುತ್ತಿರುವಾಗ ಯಾರೋ ನರಳುತ್ತ ರಾಮ ರಾಮ ಎಂದು ತನ್ನ ಹೆಸರು ಜಪಿಸುತ್ತಿರುವುದು ಕೇಳಿಸಿತು. ಧ್ವನಿ ಕೇಳಿ ಬಂದ ದಿಕ್ಕಿನಲ್ಲಿ ಎರಡು ಹೆಜ್ಜೆ ನಡೆದು ನೋಡಿದ.

ಹತ್ತಿರ ಹೋದಾಗ ಜಟಾಯು ಬಿದ್ದಿರುವುದು ಕಾಣಿಸಿತು. "ರಾಮ, ನಾನು ಜಟಾಯು ನಿನ್ನ ತಂದೆ ದಶರಥನ ಗೆಳೆಯ. ನೀನು ಹುಡುಕುತ್ತಿರುವ ನಿನ್ನ ಸೀತೆಯನ್ನು ಲಂಕಾಧಿಪತಿ ರಾವಣ ಕೊಂಡೊಯ್ದಿದ್ದಾನೆ. ನಾನು ಅವನನ್ನು ತಡೆದು ಈ ಮಗುವನ್ನು ಅವನಿಂದ ಬಿಡಿಸಲು ಪ್ರಯತ್ನಿಸಿದೆ. ಆದರೆ ಸಾಧ್ಯವಾಗಲಿಲ್ಲ. ನನ್ನ ಈ ಸ್ಥಿತಿಗೆ ಅವನೇ ಕಾರಣ" ಎಂದು ಆಯಾಸದಿಂದ ಹೇಳಿ ಕಣ್ಮುಚ್ಚಿದ.

ರಾಮನಿಗೆ ದುಃಖವಾಯಿತು. ರಕ್ತದ ಮಡುವಿನಲ್ಲಿ ಸಾಯುತ್ತ ಬಿದ್ದಿದ್ದರೂ ತನಗೆ ಸುದ್ದಿ ಮುಟ್ಟಿಸಲು ಪ್ರಾಣ ಹಿಡಿದಿದ್ದ ತಂದೆಯ ಸಮಾನನಾದ ಜಟಾಯುವಿನ ಬಗ್ಗೆ ಭಕ್ತಿ, ಗೌರವ ಮೂಡಿತು. ತಂದೆಯಂತಿದ್ದ ಅವನ ಅಂತ್ಯ ಸಂಸ್ಕಾರ ಮುಗಿಸಿ, ಮುಂದೆ ಹೋದ.

ರಾಮ. ಲಕ್ಷ್ಮಣರು ಅಸಹಾಯಕರಂತೆ, ಕಡೆಗೆ ಜಟಾಯು ಸೂಚಿಸಿದ ದಿಕ್ಕನ್ನು ಹಿಡಿದು ನಡೆದರು. ದುಃಖ, ಉಮ್ಮಳ, ಭಯ, ಆತಂಕ, ದಣಿವುಗಳಿಂದ ಇಬ್ಬರೂ ಸೋತು ಹೋಗಿದ್ದರು. ಲಂಕೆಯನ್ನು ತಲುಪಿ ಅವಳನ್ನು ಬಿಡಿಸಿಕೊಂಡು ಬರುವುದಾದರೂ ಹೇಗೆ? ಎಂದೆಲ್ಲಾ ಆಲೋಚಿಸುತ್ತಿದ್ದರು.



## ಸೀತೆಯ ಶೋಧದಲ್ಲಿ

ಭಾರವಾದ ಹೃದಯದಿಂದ ಇಬ್ಬರೂ ದಕ್ಷಿಣದ ಕಡೆ ಹೊರಟರು. ಸ್ವಲ್ಪವೇ ದೂರ ನಡೆದಿರಬಹುದು. ಅಷ್ಟರಲ್ಲಿ ತಲೆಯಾಗಲೀ, ಕಾಲುಗಳಾಗಲೀ ಇಲ್ಲವ ವಿಕಾರವಾದ ದೇಹವೊಂದು ಕಾಣಿಸಿತು. ಅದು ಕಬಂಧನೆಂಬ ರಾಕ್ಷಸನದಾಗಿತ್ತು. ತಾನಿರುವ ಜಾಗದಿಂದ ಒಂದಿಷ್ಟೂ ಚಲಿಸದೆ, ತನ್ನ ಬಾಹುಗಳನ್ನು ಎಷ್ಟು ದೂರಕ್ಕಾದರೂ ಬೆಳೆಸಿ ಚಾಚಿ ಆಹಾರವನ್ನು ಸಂಪಾದಿಸಿಕೊಳ್ಳುತ್ತಿದ್ದ.

ಅವನು ರಾಮ, ಲಕ್ಷ್ಮಣರತ್ತ ತನ್ನ ಬಾಹುಗಳನ್ನು ಚಾಚಿ ಅವರಿಬ್ಬರನ್ನೂ ಹಿಡಿದ. ಒಂದು ಕ್ಷಣ ಇಬ್ಬರೂ ದಿಗ್ಭ್ರಾಂತರಾದರು. ಆದರೆ ಮರುಗಳಿಗೆಯೇ ಚೇತರಿಸಿಕೊಂಡು ಸಮಯ ಪ್ರಜ್ಞೆಯಿಂದ ಆ ರಾಕ್ಷಸನ ಬಾಹುಗಳನ್ನು ಕತ್ತರಿಸಿ ಹಾಕಿದರು ಮತ್ತು ಅವನ ದೇಹವನ್ನು ಬೆಂಕಿಗೆ ಹಾಕಿದರು. ಆದರೆ ಮರುಕ್ಷಣದಲ್ಲಿಯೇ ಆ ಬೆಂಕಿಯ ನಡುವಿನಿಂದ ಗಂದರ್ವನೊಬ್ಬನು ಪ್ರತ್ಯಕ್ಷನಾಗಿ ತನ್ನ ಪರಿಚಯ ತಿಳಿಸಿ ಶಾಪದ ವಿವರ ನೀಡಿ, ಶಾಪಮುಕ್ತನಾಗಿದ್ದಕ್ಕೆ ಅವರಿಬ್ಬರಿಗೂ ಕೃತಜ್ಞತೆ ಹೇಳಿ ಹೊರಟು ಹೋದ.

ಅಲ್ಲಿಂದ ಮುಂದೆ ಪಂಪಾಕ್ಷೇತ್ರದ ಕಡೆ ಹೆಜ್ಜೆ ಹಾಕಿದರು. ಆ ಪ್ರದೇಶ ಬಹಳ ಸುಂದರವಾಗಿತ್ತು. ಹತ್ತಿರದಲ್ಲಿಯೇ ಒಂದು ಆಶ್ರಮವಿತ್ತು. ಆ ಆಶ್ರಮದಲ್ಲಿ ಶಬರಿ ಹೆಸರಿನ ವೃದ್ದ ಸಂನ್ಯಾಸಿನಿಯೊಬ್ಬಳಿದ್ದಳು. ಅವಳು ಮತಂಗಮುನಿಯ ಶಿಷ್ಯೆ. ರಾಮನ ಬರವಿಗಾಗಿಯೇ ಕಾದು ಪ್ರಾಣ ಹಿಡಿದು ಬದುಕಿದ್ದಳು. ರಾಮ, ಲಕ್ಷ್ಮಣರು ಆಕೆಯ ಆಶ್ರಮವನ್ನು ಪ್ರವೇಶಿಸಿ, ತಾಯಿಯಂತಿರುವ ಆಕೆಯನ್ನು ಮಾತಾಡಿಸಿ ಆಕೆಯು ನೀಡಿದ ಪ್ರೀತಿಯ ಆತಿಥ್ಯವನ್ನು ಸವಿದರು, ವಾತ್ಸಲ್ಯದ ತಂಪನ್ನು ಅನುಭವಿಸಿದರು.

ಆಕೆಯೂ ಅವರನ್ನು ಮಕ್ಕಳಿಗಿಂತ ಹೆಚ್ಚಾಗಿ ಆತ್ಮೀಯವಾಗಿ ನೋಡಿಕೊಂಡಳು. ತನ್ನೆಲ್ಲ ಕಥೆಯನ್ನು ವಿವರಿಸಿದಳು. ತಾನು ಅವರಿಗಾಗಿ ದೀರ್ಘ ಕಾಲದಿಂದ ಕಾದಿದ್ದ ವಿಷಯ ತಿಳಿಸಿದಳು. ತನ್ನ ನಿರೀಕ್ಷೆ, ಆಸೆಗಳು ಪೂರೈಸಿದ್ದರಿಂದ ಅಗ್ನಿ ಪ್ರವೇಶ ಮಾಡಿ ದೇಹತ್ಯಾಗ ಮಾಡಲು ಅವರ ಅಪ್ಪಣೆ ಕೇಳಿದಳು. ರಾಮ, ಲಕ್ಷ್ಮಣರಿಗೆ ತಾಯಿಯಂತಿದ್ದ ಆಕೆಯ ಅಗ್ನಿ ಪ್ರವೇಶ ನೋಡಲಾಗಲಿಲ್ಲ. ದುಃಖದಿಂದ ಹೃದಯಗಳು ಭಾರವಾದವು.

ಪಂಪಾ ಪ್ರದೇಶದ ಸುತ್ತಮುತ್ತ ಅಲೆದಾಡಿದರು. ಒಂದೊಂದು ಕ್ಷಣವೂ ಸೀತೆಯ ನೆನಪು ಕಾಡುತ್ತಿತ್ತು. ರಾಮನಲ್ಲಿ ನಿರಾಶೆ, ಹತಾಶೆಗಳು ಮನೆಮಾಡತೊಡಗಿದವು. ಆದರೆ ಲಕ್ಷ್ಮಣ ಅಣ್ಣನಿಗೆ ಧೈರ್ಯ ಹೇಳುತ್ತಲೇ ಇದ್ದ.

ಋಷ್ಯಮೂಕ ಪರ್ವತ ಪ್ರದೇಶವನ್ನು ತಲುಪಿದ ಅವರು ಕಿಷ್ಕಿಂಧೆಯ ಅರಸ ಸುಗ್ರೀವನಿಗಾಗಿ ಹುಡುಕಾಡತೊಡಗಿದರು. ಸೀತೆಯ ವಿಚಾರವನ್ನೆಲ್ಲ ಕೇಳಿದ ಶಬರಿ, ಸುಗ್ರೀವನನ್ನು ಭೇಟಿಯಾಗಲು ತಿಳಿಸಿದ್ದಳು. ರಾಮನಿಗೆ ಸಹಾಯವಾಗುವುದಾದರೆ ಅವನಿಂದ ಮಾತ್ರ ಸಾಧ್ಯ ಎಂದು ಹೇಳಿದ್ದಳು. ಅದೇ ಸಮಯದಲ್ಲಿ ಸುಗ್ರೀವ, ಹನುಮಂತ, ಜಾಂಬವಂತ ಮತ್ತು ಇತರ ಆಪ್ತರೊಂದಿಗೆ ಸಮಾಲೋಚನೆ ನಡೆಸುತ್ತಿದ್ದ. ಅಕಸ್ಮಾತ್ತಾಗಿ ರಾಮ, ಲಕ್ಷ್ಮಣರು ಅಡ್ಡಾಡುತ್ತಿರುವುದು ಅವನ ಕಣ್ಣಿಗೆ ಬಿತ್ತು. ಅನುಮಾನ ಭಯಗಳಿಂದ, 'ಸಭಿಕರೇ ಆಪ್ತರೇ, ನೋಡಿ ವಾಲಿ ಇಲ್ಲಿಗೂ ಬಿಡದೆ ನಮ್ಮ ಬೆನ್ನು ಹತ್ತಿದಂತಿದೆ. ಮನುಷ್ಯರಂತಿರುವ ಈ ಇಬ್ಬರು ವಾಲಿಯಿಂದಲೇ ಕಳಿಸಲ್ಪಟ್ಟಿರಬೇಕು" ಎಂದು ಹೇಳಿ ತನ್ನ ಸಂದೇಹವನ್ನು ವ್ಯಕ್ತಪಡಿಸಿದ.

ಅವನ ಮುಖ್ಯಮಂತ್ರಿಯಾದ ಹನುಮಂತನೂ ಅವರನ್ನು ನೋಡಿದ. ಆದರೆ ಅವನಿಗೆ ಅವರು ಶತ್ರುಗಳಿರಬಹುದು ಎನಿಸಲಿಲ್ಲ. ಆದ್ದರಿಂದ ತಾನೇ ಖುದ್ದಾಗಿ ಹೋಗಿ ಅವರನ್ನು ಭೇಟಿಯಾಗಿ ವಿಷಯ ಏನೆಂದು ತಿಳಿದು ಬರುತ್ತೇನೆಂದು ಸುಗ್ರೀವನಿಗೆ ಹೇಳಿ, ರಾಮ, ಲಕ್ಷ್ಮಣರಿದ್ದ

ಎಡೆಗೆ ಬ್ರಾಹ್ಮಣನ ವೇಷದಲ್ಲಿ ಬಂದು ಅವರಿಗೆ ಕಾಣಿಸಿಕೊಂಡ. ಅವರ ಹತ್ತಿರಕ್ಕೆ ಬಂದು, "ಅಪ್ಪ! ನೀವುಗಳು ಯಾರು? ನೋಡಿದರೆ ಜಟಾಧಾರಿ ತಪಸ್ವಿಗಳಂತೆ ಕಾಣುತ್ತೀರಿ. ಆದರೆ ಕೈಯಲ್ಲಿ ಬಿಲ್ಲು ಬಾಣಗಳಿವೆ. ಏತಕ್ಕಾಗಿ ಇಲ್ಲಿಗೆ ಬಂದಿರಿ? ಯಾರಿಗಾಗಿ ಅಲೆದಾಡುತ್ತಿದ್ದೀರಿ. ನಿಮ್ಮನ್ನು ಇಲ್ಲಿಗೆ ಕಳಿಸಿದವರು ಯಾರು?' ಎಂದು ಒಂದೇ ಸಮನೆ ಪ್ರಶ್ನೆಗಳನ್ನು ಎಸೆದ.

ರಾಮ ವಿನಯದಿಂದ ಹೇಳಿದ, ಬ್ರಾಹ್ಮಣ ಶ್ರೇಷ್ಠನೇ ನಾವು ಅಯೋಧ್ಯೆಯ ಅರಸ ದಶರಥನ ಮಕ್ಕಳು, ನಾನು ರಾಮ ಮತ್ತು ಇವನು ನನ್ನ ತಮ್ಮ ಲಕ್ಷ್ಮಣ. ವನವಾಸದಲ್ಲಿ ಇದ್ದಾಗ ನನ್ನ ಮಡದಿ ಸೀತೆಯನ್ನು ರಾಕ್ಷಸರಾಜನಾದ ಲಂಕಾಧಿಪತಿಯಾದ ರಾವಣ ಅಪಹರಿಸಿಕೊಂಡು ಹೋಗಿದ್ದಾನೆ. ನಾವು ಆಕೆಗಾಗಿ ಹುಡುಕುತ್ತಿದ್ದೇವೆ. ಅವಳನ್ನು ಹುಡುಕಲು ವಾನರ ದೊರೆ ಸುಗ್ರೀವ ಸಹಾಯ ಮಾಡುತ್ತಾನೆಂದು ಸಂನ್ಯಾಸಿನಿ ಶಬರಿ ಸೂಚಿಸಿದಳು.

"ಸ್ವಾಮಿ, ಸಾಧ್ಯವಾದರೆ ಸುಗ್ರೀವನನ್ನು ಕಾಣುವುದು ಎಲ್ಲಿ, ಹೇಗೆ ಎಂಬುದನ್ನು ತಿಳಿಸಿ" ಎಂದು ವಿನಯದಿಂದ ಕೇಳಿಕೊಂಡ.

ಅಷ್ಟು ಹೊತ್ತಿಗೆ ಹನುಮಂತ, ಅವನ ನಯ, ವಿನಯಗಳಿಂದ ಪ್ರಭಾವಿತನಾಗಿದ್ದ. ಅವನ ಬಗ್ಗೆ ಒಳ್ಳೆಯ ಅಭಿಪ್ರಾಯ ತಳೆದ. ಅವರ ಮುಂದೆ ತನ್ನ ನಿಜರೂಪವನ್ನು ತಳೆದು ನಿಂತ. ರಾಮನ ದುಃಖದ ಕಥೆ ಕೇಳಿ ಮನಕರಗಿದ. ಹಾಗೆಯೇ ತನ್ನ ರಾಜನಾದ ಸುಗ್ರೀವನೂ ಇದೇ ರೀತಿ ಅಣ್ಣ ವಾಲಿಯಿಂದ. ತನ್ನ ಮಡದಿ ಅಪಹೃತಳಾಗಿ, ವಿಯೋಗ ದುಃಖವನ್ನು ಅನುಭವಿಸುತ್ತಿರುವುದಾಗಿಯೂ, ರಾಜ್ಯವನ್ನು ಕಳೆದುಕೊಂಡು ವನವಾಸಿಯಂತೆ ಬದುಕುತ್ತಿರುವುದಾಗಿಯೂ ತಿಳಿಸಿದ. ಇಬ್ಬರೂ ಒಂದೇ ರೀತಿ ದುಃಖವನ್ನು ಅನುಭವಿಸುತ್ತಿರುವುದರಿಂದ ಖಂಡಿತವಾಗಿಯೂ, ಅವರಿಗೆ ಸಹಾಯ ಮಾಡುತ್ತಾನೆಂದು ಭರವಸೆ ನೀಡಿದ. ಹಾಗೆಯೇ ರಾಮನು ಸುಗ್ರೀವನಿಗೆ ಕಳೆದು ಹೋದ ರಾಜ್ಯವನ್ನು, ಅಪಹರಣಕ್ಕೆ ಒಳಗದ ಮಡದಿಯನ್ನು ವಾಲಿಯಿಂದ ಸಂರಕ್ಷಿಸಿಕೊಡಬೇಕೆಂದು ಪ್ರಾರ್ಥಿಸಿದ. ಈಗ ಸದ್ಯಕ್ಕೆ ಸುಗ್ರೀವ ಒಂದು ರಹಸ್ಯ ಸ್ಥಳದಲ್ಲಿ, ಋಷ್ಯಮೂಕ

ಪರ್ವತದ ಮೇಲೆ ಇರುವನೆಂದು ಹೇಳಿ, ರಾಮ, ಲಕ್ಷ್ಮಣರಿಗೆ ದಾರಿ ತೋರಿದ.

ರಾಮ, ಲಕ್ಷ್ಮಣರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಪರ್ವತ ಹತ್ತುವುದು ಅವರಿಗೆ ಅಸಾಧ್ಯವೆನಿಸಿ ಅನುಮಾನಿಸುತ್ತ ನಿಂತಿರುವುದನ್ನು ಗಮನಿಸಿದ ಹನುಮಂತ ನಗುತ್ತಾ ಹೇಳಿದ, "ನಿಮ್ಮ ಸಮಸ್ಯೆ ನನಗೆ ಅರ್ಥವಾಗಿದೆ. ಬನ್ನಿ, ನಾನೇ ನಿಮ್ಮನ್ನು ಮೇಲಕ್ಕೆ ಕರೆದೊಯ್ಯುತ್ತೇನೆ" ಎಂದು ಇಬ್ಬರನ್ನೂ ಹೆಗಲ ಮೇಲೆ ಕೂರಿಸಿಕೊಂಡು ಸರಾಗವಾಗಿ ಪರ್ವತವನ್ನು ಹತ್ತಿ ಅವರಿಬ್ಬರನ್ನೂ ಸುಗ್ರೀವನ ಎದುರಿನಲ್ಲಿ ನಿಲ್ಲಿಸಿದ.

ಹನುಮಂತ ಸುಗ್ರೀವನಿಗೆ ಅವರಿಬ್ಬರ ಪರಿಚಯ ಮಾಡಿಸಿ ಅವರ ಕಥೆಯನ್ನು ವಿವರಿಸಿದ. ಅವರಿಗೆ ಸುಗ್ರೀವನ ಸಹಾಯ ಬೇಕೆಂಬ ಸಂಗತಿಯನ್ನು ತಿಳಿಸಿದ. ಸುಗ್ರೀವನಿಗೆ ರಾಮನ ಪರಿಚಯವಾದುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದ. ತನ್ನ ಮಡದಿಯನ್ನು ಕರೆದೊಯ್ದ ತನ್ನ ಅಣ್ಣ ವಾಲಿಯ ಕ್ರೌರ್ಯ, ದುಷ್ಟತನ, ದೌರ್ಜನ್ಯಗಳನ್ನು ತಿಳಿಸಿ, ತನಗೆ ಅವರ ಸಹಾಯಬೇಕೆಂದು ಬೇಡಿಕೊಂಡ.

ರಾಮ, ಸುಗ್ರೀವರು ಸ್ನೇಹ ಹಸ್ತವನ್ನು ಚಾಚಿದರು. ಪರಸ್ಪರ ಒಬ್ಬರಿಗೊಬ್ಬರು ಸಹಾಯ ಮಾಡುವುದಾಗಿ ಪ್ರತಿಜ್ಞೆ ಮಾಡಿದರು. ರಾಮನೇ ಸಹಾಯ ಮಾಡಲು ಮೊದಲಿಗೆ ಮುಂದೆ ಬಂದ. "ಗೆಳೆಯ ನಾವಿಬ್ಬರೂ ಸಮ ದುಃಖಿಗಳು. ಪತ್ನಿ ವಿಯೋಗದ ನೋವು ಹೇಗಿರುತ್ತದೆಂದು ಸ್ವತಃ ಅನುಭವದಿಂದ ತಿಳಿದಿದ್ದೇನೆ. ನೀನೇನೂ ಚಿಂತೆ ಮಾಡಬೇಡ; ಹೆದರಿಕೆಯೂ ಬೇಡ. ನಿನ್ನ ಅಣ್ಣನಿಂದಾದ ಅನ್ಯಾಯವನ್ನು ಸರಿಪಡಿಸುತ್ತೇನೆ. ನಿನ್ನ ರಾಜ್ಯ, ಮಡದಿ ಎರಡನ್ನೂ ನಿನಗೆ ಕೊಡಿಸುತ್ತೇನೆ" ಎಂದು ನುಡಿದು ಧೈರ್ಯ, ಭರವಸೆಗಳನ್ನು ತುಂಬಿದ.

ಸುಗ್ರೀವ ತನ್ನಲ್ಲಿದ್ದ ಒಡವೆಯ ಗಂಟನ್ನು ರಾಮನ ಕೈಗಿಟ್ಟು, "ಗೆಳೆಯ ಕೆಲವು ದಿನಗಳ ಹಿಂದ ಈ ಒಡವೆಗಳ ಗಂಟು ನನಗೆ ದೊರೆಯಿತು. ಇದನ್ನು ನೋಡು. ಬಹುಶಃ ಇದು ನಿನ್ನ ಪತ್ನಿಯದಾಗಿದ್ದರೂ ಆಗಿರಬಹುದು" ಎಂದು ಹೇಳಿದ.

ರಾಮ ಆ ಒಡವೆಗಳನ್ನು ಗಮನಿಸಿದ. ಅವೆಲ್ಲವೂ ಸೀತೆಯವೇ ಎನಿಸಿತು. ಆದರೂ ಮತ್ತೊಮ್ಮೆ ಖಚಿತಪಡಿಸಿಕೊಳ್ಳಲು ಅವುಗಳನ್ನು ಲಕ್ಷ್ಮಣನ ಮುಂದಿಟ್ಟು, "ನೋಡು ಲಕ್ಷ್ಮಣ, ಸರಿಯಾಗಿ ನೋಡಿ ಹೇಳು. ಇವುಗಳು ನಿನ್ನ ಅತ್ತಿಗೆಯವು ತಾನೇ?" ಎಂದು ಕೇಳಿದ.

ಲಕ್ಷ್ಮಣ ಅವುಗಳ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. "ಅಣ್ಣಾ, ದಯವಿಟ್ಟು ಕ್ಷಮಿಸು. ದಿನನಿತ್ಯ ಅತ್ತಿಗೆಯ ಪಾದಸ್ಪರ್ಶ ಮಾಡುವಾಗ ಆಕೆಯ ಕಾಲುಂಗುರ, ಕಾಲ್ಗೆಜ್ಜೆಗಳನ್ನು ಮಾತ್ರವೇ ಗಮನಿಸಿರುವೆನಲ್ಲದೆ ಮತ್ತಾವುದನ್ನು ನಾನು ಕಂಡವನಲ್ಲ" ಎಂದು ವಿನಯದಿಂದ ನುಡಿದ.

ರಾಮನ ಕಣ್ಣು ತುಂಬಿ ಬಂತು. ಸೀತೆಯ ನೆನಪು ಒತ್ತರಿಸಿ ಬಂತು. ಸುಗ್ರೀವ, ಲಕ್ಷ್ಮಣರಿಬ್ಬರೂ ರಾಮನನ್ನು ಸಮಾಧಾನಪಡಿಸಿದರು.

ಒಪ್ಪಂದದಂತೆ ಮೊದಲು ರಾಮ ಸುಗ್ರೀವನಿಗೆ ಸಹಾಯ ಮಾಡಬೇಕಿತ್ತು. ಆದ್ದರಿಂದ ರಾಮ ಸುಗ್ರೀವನಿಗೆ, "ಗೆಳೆಯ ಒಂದು ದಿನವನ್ನು ಗೊತ್ತು ಮಾಡಿ, ನಿನ್ನ ಅಣ್ಣ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸು, ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ" ಎಂದು ಹೇಳಿದ.

ಸುಗ್ರೀವನಿಗೆ ಸಂತೋಷವಾಯಿತು. ನಿಶ್ಚಿತವಾದ ದಿನದಂದು ವಾಲಿಯು ವಾಸವಾಗಿದ್ದ ಗುಹೆಯ ಅರಮನೆಯ ಬಾಗಿಲ ಮುಂದೆ ನಿಂತು ಗರ್ಜಿಸಿ, ಪ್ರತಾಪದ ಮಾತುಗಳೊಂದಿಗೆ ಯುದ್ಧಕ್ಕೆ ಪ್ರಚೋದನೆ ನೀಡಿ ಕರೆದ. ವಾಲಿಗೆ ಆಶ್ಚರ್ಯವಾಯಿತು. ತನ್ನ ಮುಂದೆ ನಿಲ್ಲಲೂ ಹೆದರುತ್ತಿದ್ದ ಸುಗ್ರೀವ ಇಂದು ಹೀಗೆ ಬಂದು ತನ್ನನ್ನೇ ಯುದ್ಧಕ್ಕೆ ಸವಾಲೆಸೆಯುತ್ತಿದ್ದಾನೆ. ಇಂಥ ಧೈರ್ಯ ಹೇಗೆ ಬಂತು ಇವನಿಗೆ ಎಂದು ಯೋಚಿಸುವಂತಾದರೂ ಅವನ ಸವಾಲಿಗೆ ಉತ್ತರ ಕೊಡಲೇಬೇಕಿತ್ತು. ತಾನು ಅಬ್ಬರಿಸುತ್ತ ಗದೆಯನ್ನು ಬೀಸುತ್ತ ಹೊರಗೆ ಬಂದ. ಇಬ್ಬರ ನಡುವೆ ಭಯಂಕರ ಯುದ್ಧವಾಯಿತು. ಎಷ್ಟೇ ಹೋರಾಡಿದರೂ ವಾಲಿಯಿಂದ ಸಾಕಷ್ಟು ಹೊಡೆತ ತಿಂದು ಸುಗ್ರೀವ ಹಣ್ಣುಗಾಯಿ ನೀರು ಗಾಯಿ ಆದ. ಮೈಯೆಲ್ಲ ಗಾಯಗಳು!! ಹೆದರಿ ಓಡಿ ಹಿಂತಿರುಗಿ ಬಂದು ಬಿಟ್ಟ.

ಸುಗ್ರೀವನಿಗೆ ಒಂದು ಕಡೆ ನೋವು ಮತ್ತೊಂದು ಕಡೆ ರಾಮನ ಮೇಲೆ ಸಿಟ್ಟು! ಮಾತಿನಂತೆ ವಾಲಿಗೆ ಏನನ್ನೂ ಮಾಡಲಿಲ್ಲ. ಹೀಗೇಕೆ ಮೋಸ ಮಾಡಿದನೆಂದು ಅರ್ಥವಾಗಲಿಲ್ಲ.

ಸುಗ್ರೀವ ಬಾಯಿಬಿಟ್ಟು ರಾಮನನ್ನು ದೂರಲಿಲ್ಲವಾದರೂ ಅವನ ಮನಸ್ಸಿನಲ್ಲಿ ನಡೆಯುತ್ತಿದ್ದ ಸಂಘರ್ಷ, ತನ್ನ ಮೇಲೆ ಮೂಡಿರಬಹುದಾದ ಸಿಟ್ಟು ರಾಮನಿಗೆ ಅರ್ಥವಾಯಿತು. ತಾನೇ ಮುಂದಾಗಿ, "ಗೆಳೆಯಾ ಕ್ಷಮಿಸು, ನನ್ನ ಬಗ್ಗೆ ನಿನ್ನ ಮನಸ್ಸಿನಲ್ಲಿ ಏನೆಲ್ಲ ಭಾವನೆಗಳು ಎದ್ದಿರಬಹುದೋ ನಾನು ಊಹಿಸಬಲ್ಲೆ. ವಾಲಿಯನ್ನು ನಾನೇಕೆ ಕೊಲ್ಲಲಿಲ್ಲವೆಂಬ ನಿನ್ನ ಅನುಮಾನದಲ್ಲಿ ಯಾವ ತಪ್ಪೂ ಇಲ್ಲ. ಆದದ್ದು ಎಷ್ಟೇ! ನೀವಿಬ್ಬರೂ ಹೋಲಿಕೆಯಲ್ಲಿ ಒಂದೇ ಥರ ಇದ್ದೀರಿ. ಎಷ್ಟು ಸಲ ಪ್ರಯತ್ನಿಸಿದರೂ ನಿನ್ನನ್ನು, ವಾಲಿಯನ್ನು ಪ್ರತ್ಯೇಕವಾಗಿ ಗುರುತಿಸಲು ಆಗಲಿಲ್ಲ. ನಾನೇನಾದರೂ ಬಾಣ ಬಿಟ್ಟರೆ ಅಚಾತುರ್ಯದಿಂದ ನಿನಗೆಲ್ಲಿ ತಗುಲುವುದೋ ಎಂದು ಹೆದರಿ ಸುಮ್ಮನಾದೆ. ಆದ್ದರಿಂದ ನಾಳಿನ ಯುದ್ಧದಲ್ಲಿ ನಿನ್ನನು ಗುರತಿಸಲು ಆಗುವಂತೆ ಒಂದು ಹೂಮಾಲೆಯನ್ನು ಧರಿಸಿಕೊಂಡು ಹೋಗು" ಎಂದು ಸಲಹೆ ಕೊಟ್ಟ. ಸುಗ್ರೀವನಿಗೆ ರಾಮನ ಸಂದಿಗ್ಧ ಅರ್ಥವಾಗಿ, ಶಾಂತನಾಗಿ. ರಾಮನ ಮಾತಿನಂತೆ ಮರು ದಿವಸ ಕೊರಳಿನಲ್ಲಿ ಹೂಮಾಲೆ ಧರಿಸಿ ಮತ್ತೆ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಿದ. ವಾಲಿಗೆ ಮತ್ತೂ ಆಶ್ಚರ್ಯವಾಯಿತು. ನೆನ್ನೆಯಷ್ಟೆ ಅಷ್ಟೊಂದು ಹೊಡೆತ ತಿಂದು ಸೋತಿದ್ದರೂ, ಈಗ ಮತ್ತೆ ಬಂದು ಕರೆಯಬೇಕೆಂದರೆ ಏನೋ ಮೋಸವಿದೆ ಎನಿಸಿತು. ವಾಲಿಯ ಹೆಂಡತಿಗೂ ಏನೋ ಅನುಮಾನ!! ಯಾವುದೋ ಅಪಾಯ ಕಾದಿರಬಹುದು ಎನಿಸಿ, ಗಂಡನನ್ನು ಯುದ್ಧಕ್ಕೆ ಹೋಗಬೇಡವೆಂದು ಅಂಗಲಾಚಿ ಬೇಡಿಕೊಂಡಳು. ಆದರೆ ವಾಲಿ ಅದನ್ನು ಕಿವಿ ಮೇಲೆ ಹಾಕಿಕೊಳ್ಳಲಿಲ್ಲ. ಸವಾಲನ್ನು ಎದುರಿಸದಿದ್ದರೆ ತನ್ನ ಪೌರುಷವೇನಾಗುವುದು ಎನಿಸಿ ಹೊರಕ್ಕೆ ಬಂದು ಸುಗ್ರೀವನ ಮೇಲೆ ಆಕ್ರಮಣ ಮಾಡಿದ.



ಇಬ್ಬರೂ ಸ್ವಲ್ಪ ಹೊತ್ತು ಕಾದಾಡಿದರು. ಮತ್ತೆ ವಾಲಿ ಸುಗ್ರೀವನಿಗೆ ಬಲವಾದ ಪೆಟ್ಟು ಕೊಡುವುದರಲ್ಲಿದ್ದ. ಅಷ್ಟರಲ್ಲಿ ಎಲ್ಲಿಂದಲೋ ಬಾಣವೊಂದು ಬಂದು ವಾಲಿಯೆದೆಗೆ ನಾಡಿತು. ಕೂಡಲೇ ಕೆಳಗೆ ಬಿದ್ದ. ಇನ್ನೇನು ಸಾಯುವುದರಲ್ಲಿದ್ದ. ಅಷ್ಟರಲ್ಲಿ ರಾಮ ಅಲ್ಲಿಗೆ ಬಂದ. ವಾಲಿಗೆ ಅರ್ಥವಾಯಿತು. ಇದು ರಾಮನ ಕೆಲಸ ಎಂದು. ಅವನು ರಾಮನಿಗೆ, “ರಾಮ ನೀನು ಮಾಡಿದ್ದು ಸರಿಯಲ್ಲ. ಹೇಡಿಯಂತೆ ಮರೆಯಲ್ಲಿ ನಿಂತು ಹೊಡೆದಿರುವೆಯಲ್ಲ. ಸಾಯುವುದಕ್ಕೆ ನಾನು ಹೆದರುವುದಿಲ್ಲ. ಅದರಲ್ಲಿಯೂ ನಿನ್ನ ಕೈಯ್ಯಿಂದ ಸಾವು ನನಗೆ ಸಂತೋಷವೇ. ಆದರೆ ಸಾವನ್ನು ನನಗೆ ಕೊಟ್ಟ ರೀತಿ ಮಾತ್ರ ಸರಿಯಲ್ಲ. ಇರಲಿ, ನಾನು ಸಂತೋಷದಿಂದಲೇ ಸಾಯುತ್ತೇನೆ. ಆದರೆ ನನ್ನದೊಂದು ಮಾತನ್ನು ನಡೆಸಿಕೊಡು. ನಾನಿಲ್ಲದೆ ನನ್ನ ಮಗ ಅಂಗದ ಅನಾಥನಾಗಿದ್ದಾನೆ. ನೀನು ಮತ್ತು ಸುಗ್ರೀವ ಅವನ ಜವಾಬ್ದಾರಿಯನ್ನು ಒಪ್ಪಿಕೊಳ್ಳಬೇಕು. ಇದೋ ನನ್ನ ಮಗ. ಇನ್ನು ಮುಂದೆ ಅವನು ನಿಮ್ಮವನು” ಎಂದು ಹೇಳುತ್ತಾ ಕಣ್ಣು ಮುಚ್ಚಿದ. ರಾಮ, ಸುಗ್ರೀವರು ದುಃಖದಿಂದ ಕಣ್ಣೀರಿಟ್ಟರು.

ರಾಮ ತನ್ನ ಮಾತಿನಂತೆ ಸುಗ್ರೀವನಿಗೆ ರಾಜ್ಯವನ್ನು ಗಳಿಸಿಕೊಟ್ಟಿದ್ದ. ಹೆಂಡತಿಯನ್ನೂ ಪಡೆಯುವಂತೆ ಮಾಡಿದ್. ಸುಗ್ರೀವ ರಾಜ್ಯ ಸುಖ ಭೋಗಗಳಲ್ಲಿ ವ್ಯಸ್ತನಾದ. ರಾಮನ ವಿಚಾರದಲ್ಲಿ ಸ್ವಲ್ಪ ನಿರ್ಲಕ್ಷ್ಯ ತೋರಿದಂತೆ ಕಾಣಿಸಿತು. ಲಕ್ಷ್ಮಣನಿಗೆ ಸುಗ್ರೀವನ ರೀತಿ ಕೋಪ ತರಿಸಿತು. ಅಣ್ಣನಿಗೆ, "ಅಣ್ಣ, ಈ ಸುಗ್ರೀವ ಸುಖದ ಸೊಕ್ಕಿನಲ್ಲಿ ಮಾತನ್ನೇ ಮರೆತಂತಿದೆ. ನಾನು ಹೋಗಿ ಈಗಲೇ ಅವನನ್ನು ವಿಚಾರಿಸುತ್ತೇನೆಂದ. ರಾಮನಿಗೂ ಸ್ವಲ್ಪ ಅಸಮಾಧಾನವೇ ಆಗಿದ್ದುದರಿಂದ, ಲಕ್ಷ್ಮಣನ ಮಾತಿಗೆ ಕೂಡಲೇ ಒಪ್ಪಿಗೆ ಸೂಚಿಸಿದ. ಹಾಗೆಯೇ ಅವನ ಕರ್ತವ್ಯದ ಕಡೆಗೂ ಗಮನ ಹರಿಸುವಂತೆ ಹೇಳಿದ.

ಅಣ್ಣನ ಮಾತಿನಂತೆ ಲಕ್ಷ್ಮಣ ಸುಗ್ರೀವನ ಬಳಿಗೆ ಬಂದು ರಾಮನಿಗೆ ಕೊಟ್ಟಿದ್ದ ವಚನದ ಬಗ್ಗೆ ನೆನಪಿಸಿದ. ಸುಗ್ರೀವನಿಗೆ ಕೂಡಲೇ ತನ್ನ ತಪ್ಪಿನ ಅರಿವಾಯಿತು. ತನ್ನ ಭೋಗ ವಿಲಾಸಗಳಲ್ಲಿ ಮೈಮರೆತು ರಾಮನಿಗೆ ಅಪಚಾರ ಮಾಡಿದ್ದಕ್ಕಾಗಿ ತುಂಬಾ ಪಶ್ಚಾತ್ತಾಪ ಪಟ್ಟು ಕ್ಷಮೆ ಯಾಚಿಸಿದ.

ಸುಗ್ರೀವ ತಕ್ಷಣವೇ ಮಂತ್ರಿ ಮುಖ್ಯರನ್ನು, ಸೇನಾ ನಾಯಕರನ್ನು ಕರೆಸಿ ಸಭೆ ನಡೆಸಿದ. ರಾಮ, ಲಕ್ಷ್ಮಣರೂ ಆ ಸಭೆಯಲ್ಲಿ ಉಪಸ್ಥಿತರಿದ್ದರು. ಸೀತೆಯನ್ನು ಹುಡುಕುವ ಕಾರ್ಯಾಚರಣೆಯ ಸ್ವರೂಪದ ಬಗ್ಗೆ ಚರ್ಚಿಸಿದ ಮೇಲೆ ಸುಗ್ರೀವ ತನ್ನ ಸೈನ್ಯಕ್ಕೆ ಆದೇಶಗಳನ್ನು ನೀಡಿದ. ನಾಲ್ಕು ಗುಂಪುಗಳಾಗಿ ಸೈನಿಕರು ನಾಲ್ಕೂ ದಿಕ್ಕಿಗೆ ಹೋಗಲು ಸೂಚಿಸಿದ. ಹನುಮಂತ, ಜಾಂಬವಂತ, ಅಂಗದ ಮೊದಲಾದ ಮುಖ್ಯರೂ ಅವರೊಂದಿಗೆ ಇದ್ದರು. ಆದ್ದರಿಂ ಸುಗ್ರೀವ, ರಾಮ, ಲಕ್ಷ್ಮಣರಿಗೆ ಕಾರ್ಯದ ಯಶಸ್ಸಿನ ಬಗ್ಗೆ ಪೂರ್ತಿ ಭರವಸೆಯಿತ್ತು.

ರಾಮನಿಗಂತೂ ಹನುಮಂತನಿದ್ದರೆ ಸೋಲಿನ, ನಿರಾಶೆಯ ಪ್ರಶ್ನೆಯೇ ಇರಲಾರದೆನಿಸಿತು. ಆದ್ದರಿಂದಲೇ ಹನುಮಂತನನ್ನು ಪ್ರತ್ಯೇಕವಾಗಿ ಕರೆದು ಸೀತೆಯನ್ನು ಹೇಗಾದರೂ ಪತ್ತೆ ಹಚ್ಚಿ, ಅವಳನ್ನು ಕಂಡರೆ ತನ್ನ ಗುರುತಿನ ಉಂಗುರವನ್ನು ನೀಡಬೇಕೆಂದು ತನ್ನ ಬೆರಳಿನಲ್ಲಿದ್ದುದನ್ನು ಕಳಚಿ ಕೊಟ್ಟ. ಅದನ್ನು ನೋಡಿದರೆ ಸೀತೆಗೆ ಹನುಮಂತ ತನ್ನವನೆಂದು ತಿಳಿದು ನಂಬುತ್ತಾಳೆ ಎನ್ನುವುದು ರಾಮನ ಉದ್ದೇಶವಾಗಿತ್ತು.

ಸುಗ್ರೀವಾದೇಶದಂತೆ ಸೈನ್ಯ ನಾಲ್ಕೂ ದಿಕ್ಕುಗಳತ್ತ ಪ್ರಯಾಣ ಬೆಳೆಸಿ ಶೋಧ ಕಾರ್ಯವನ್ನು ಆರಂಭಿಸಿತು. ಆದರೆ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ ಸೀತೆಯ ಸುಳಿವು ಸಿಗಲಿಲ್ಲ. ಅಂಗದ ಮತ್ತು ಹನುಮಂತರ ನಾಯಕತ್ವದಲ್ಲಿದ್ದ ಗುಂಪು ದಕ್ಷಿಣಾಭಿಮುಖವಾಗಿ ಹೊರಟಿತ್ತು. ಆ ಗುಂಪು ಕಾಡುಮೇಡು ಬೆಟ್ಟ-ಗುಡ್ಡ ಗುಹೆ, ಗಹ್ವರಗಳನ್ನೆಲ್ಲ ಶೋಧಿಸಿತು. ಹಾದಿಯಲ್ಲಿ ಸಿಕ್ಕಿದ ಹಳ್ಳಿ ನಗರಗಳಲ್ಲೂ ಹುಡುಕಾಡಿತು. ಅಲ್ಲಿಂದ ದಕ್ಷಿಣ ದಿಕ್ಕಿನಲ್ಲೇ ಇನ್ನಷ್ಟು ಮುಂದೆ ಪ್ರಯಾಣ ಬೆಳೆಸಿತು.

ಮಧ್ಯೆ ಮರಳುಗಾಡುಗಳನ್ನು ದಾಟಿ ಹೋಗಬೇಕಾಯಿತು. ಸುಡುವ ಬಿಸಿಲು, ಮೇಲೆ ಕೆಳಗೆ ದಣಿವು ಬಾಯಾರಿಕೆಗಳಿಂದ ಗುಂಪಿನಲ್ಲಿದ್ದವರೆಲ್ಲ ಮುಂದೆ ಹೆಜ್ಜೆ ಇಡದಾದರು. ಎಲ್ಲಾದರೂ ಹಣ್ಣು ನೀರು ಸಿಗಬಹುದೇನೋ ಎಂದು ಸುತ್ತಲೂ ಕಣ್ಣಾಡಿಸಿದರು. ಸ್ವಲ್ಪ ದೂರದಲ್ಲಿ ಹಕ್ಕಿಗಳ ಕಲರವ, ನೀರಿನ ಜುಳು ಜುಳು ಸದ್ದು, ತಣ್ಣಗೆ ಬೀಸಿ ಬಂದ ಗಾಳಿಯ ಅನುಭವ ಅವರಲ್ಲಿ ಗೆಲುವು ಮೂಡಿಸಿತು ನೀರು, ಆಹಾರ ಸಿಗಬಹುದೆಂಬ ಭರವಸೆಯಲ್ಲಿ ಅಲ್ಲಿ ಇಲ್ಲಿ ಓಡಾಡಿದರು. ಹಣ್ಣುಗಳಿಂದ ತುಂಬಿ ತುಳುಕಾಡುತ್ತಿದ್ದ ಮರಗಳು, ತಣ್ಣನೆಯ ಸವಿಯಾದ ನೀರಿನ ಕೊಳಗಳು ಅವರಲ್ಲಿ ಜೀವ ಮೂಡಿಸಿತು. ಹತ್ತಿರದಲ್ಲಿಯೇ ಒಂದು ನಗರವಿತ್ತು. ಅರಮನೆಗಳು, ಅಮೂಲ್ಯವಾದ ಮಣಿಗಳಿಂದ ತುಂಬಿದ ರಸ್ತೆಗಳು ಅವರನ್ನು ದಿಗ್ಭ್ರಾಂತರನ್ನಾಗಿಸಿತು. ಇದೆಲ್ಲವೂ ಅವರಿಗೆ ಕನಸಿನಂತೆ ಭಾಸವಾಯಿತು. ಹಾಗೆಯೇ ಒಂದಷ್ಟು ದೂರ ನಡೆಯಲು ಸಂನ್ಯಾಸಿಯಂತೆ ಕಾಣುತ್ತಿದ್ದ ಹೆಂಗಸೊಬ್ಬಳು ಕಣ್ಣಿಗೆ ಬಿದ್ದಳು. ಹನುಮಂತ ಮೆಲ್ಲಗೆ ಅವಳ ಬಳಿಗೆ ಹೋದ. ತಮಗೆ ಅಲ್ಲಿ ವಿಶ್ರಮಿಸಲು, ಹಣ್ಣು ಹಂಪಲು ಕಿತ್ತು ತಿನ್ನಲು ಆಜ್ಞೆ ನೀಡಬೇಕೆಂದು ಬೇಡಿದ.

ಆ ಸಂನ್ಯಾಸಿನಿ ಸ್ವಯಂಪ್ರಭೆಯಾಗಿದ್ದಳು. ಮೊದಲಿಗೆ ಅವಕಾಶ ನೀಡಲು ತಿರಸ್ಕರಿಸಿದಳು. ಆದರೆ ಅವರು ಬಂದ ಉದ್ದೇಶ, ಯಾರಿಗಾಗಿ ಬಂದಿದ್ದಾರೆ ಎಂಬುದನ್ನು ತಿಳಿದ ಮೇಲೆ ಸಂತೋಷದಿಂದ ಒಪ್ಪಿಗೆ ಕೊಟ್ಟಳು.

ಅವರೆಲ್ಲರೂ ಹಸಿವು, ನೀರಡಿಕೆ, ದಣಿವುಗಳನ್ನು ಪರಿಹರಿಸಿಕೊಂಡ ಮೇಲೆ, ಸ್ವಯಂಪ್ರಭೆ, "ಹನುಮನೇ! ನೀವಾಗಿ ನೀವು ಇಲ್ಲಿಂದ ಹೋಗಲು ಸಾಧ್ಯವಿಲ್ಲ. ಆದ್ದರಿಂದ ನಿಮ್ಮ ಉದ್ದೇಶ ಒಳ್ಳೆಯದಾದ್ದರಿಂದ ನಾನೇ ನಿಮ್ಮೆಲ್ಲರನ್ನು ಹೊರಗೆ ಕರೆದೊಯ್ಯುತ್ತೇನೆ" ಎಂದು ಗುಹೆಯಿಂದ ಅವರೆಲ್ಲರನ್ನೂ ತನ್ನ ಜೊತೆ ಹೊರಗೆ ಕರೆತಂದುಬಿಟ್ಟಳು.

ಅವಳಿಂದ ಬೀಳ್ಕೊಂಡು ಪ್ರಯಾಣ ಬೆಳೆಸಿ ಕಡೆಗೆ ಸಮುದ್ರ ದಂಡೆಯನ್ನು ತಲುಪಿದರು. ಅವರಿಗೆ ಆಶ್ಚರ್ಯವೆಂಬಂತೆ, ಉಳಿದ ಗುಂಪುಗಳೂ ಅಲ್ಲಿ ಸೇರಿದ್ದವು. ತಮಗೆ ಕೊಟ್ಟಿದ್ದ ಗಡುವು ಮುಗಿಯುತ್ತಾ ಬಂದಿದ್ದರೂ ಸೀತೆಯನ್ನು ಕಂಡುಹಿಡಿಯಲಾಗಿರಲಿಲ್ಲ. ಅವರಿಗೆಲ್ಲ ಭಯವಾಯಿತು. ಸುಗ್ರೀವನಿಂದ ತಮಗೇನು ಶಿಕ್ಷೆ ಕಾದಿದೆಯೋ ಎಂದು ಚಿಂತಿಸಿದರು. ಅದಕ್ಕಾಗಿ, ಶಿಕ್ಷೆ ಅನುಭವಿಸುವುದಕ್ಕಿಂತ ತಾವೇ ಆತ್ಮಹತ್ಯೆ ಮಾಡಿಕೊಳ್ಳುವುದು ಒಳ್ಳೆಯದೆಂದು ಯೋಚಿಸಿದರು. ಆದರೆ ಅವರ ನಾಯಕರುಗಳಾದ ಜಾಂಬವಂತ, ಅಂಗದ ಅವರಿಗೆ ಸಮಾಧಾನ ಹೇಳಿದರು.

ಅಷ್ಟರಲ್ಲಿ ಒಂದು ಗುಡ್ಡದ ಮೇಲೆ ಕುಳಿತಿದ್ದ ಸಂಪಾತಿ ವಾನರರನ್ನು ನೋಡಿ ತನಗೆ ಒಳ್ಳೆಯ ಹಬ್ಬವಾಗಲಿದೆ ಎಂದು ಹಿಗ್ಗಿದ. ಹಲವು ದಿನಗಳಿಂದ ಆಹಾರವಿಲ್ಲದೆ ಬಹಳವಾಗಿ ಬಳಲಿತ್ತು. ಮುಪ್ಪಿನಿಂದಾಗಿ ಆಹಾರದ ಬೇಟೆ ಸಾಧ್ಯವಾಗಿರಲಿಲ್ಲ.

ಅದೇ ಸಮಯಕ್ಕೆ ಹನುಮಂತ ಮತ್ತು ಇತರರು ಇಲ್ಲಿಯವರೆಗೂ ನಡೆದದ್ದನ್ನು ನೆನೆದು ಮಾತಾಡಿಕೊಂಡು ದುಃಖಿಸುತ್ತಿದ್ದರು. ಮಾತಿನ ಮಧ್ಯೆ ಹೇಗೋ ಜಟಾಯುವಿನ ಪ್ರಸ್ತಾಪಬಂತು. ಅವನ ಹೆಸರು ಕಿವಿಗೆ ಬಿದ್ದದ್ದೇ ಕುತೂಹಲದಿಂದ ಕಿವಿ ನಿಮಿರಿಸಿ ಕೇಳಿಸಿಕೊಂಡ. ಅವನ ಸಾವಿನ ಸುದ್ದಿಯೂ ತಿಳಿದು ಬಂತು. ಬಹಳವಾಗಿ ದುಃಖಿಸಿದ. ಈಗ ಅವನು ಹನುಮಂತನನ್ನು ಸಮೀಪಿಸಿ ತನಗೆ ಸೀತೆಯ ಬಗ್ಗೆ ತಿಳಿದ ವಿಷಯವನ್ನು ತಿಳಿಸಿದ. ಲಂಕಾಧೀಶ್ವರನಾದ ರಾವಣ ಸೀತೆಯನ್ನು ಒಯ್ದಿರುವನೆಂದು ಸುದ್ದಿ ಮುಟ್ಟಿಸಿದ.

ಸಂಪಾತಿಯಿಂದ ಸೂಚನೆ ದೊರೆತದ್ದೇ ಅವರೆಲ್ಲರಿಗೂ ಸಂತೋಷ ವಾಯಿತು. ಕೆಲಸ ಸಾಧಿಸಬಹುದೆಂಬ ಭರವಸೆ ಮೂಡಿತು. ಆದರೆ ಸಮುದ್ರವನ್ನು ದಾಟಿ ಲಂಕೆಯನ್ನು ತಲುಪುವುದೊಂದೇ ಅವರಿಗೆ ದೊಡ್ಡ ಸಮಸ್ಯೆಯಾಯಿತು. 'ಏನು ಮಾಡಬೇಕು? ಯಾರಿಗೆ ಈ ಕಾರ್ಯ ಸಾಧ್ಯ? ಎಂಬುದರ ಬಗ್ಗೆ ಚರ್ಚೆ ಆಯಿತು. ಒಬ್ಬೊಬ್ಬರೂ ತಮಗಿರುವ ಹಾರುವ ಸಾಮರ್ಥ್ಯ ಎಷ್ಟೆಷ್ಟೆಂದು ಪರೀಕ್ಷಿಸಿಕೊಂಡರು. ಆದರೆ ಯಾರಿಂದಲೂ ಸಹ ಸ್ರಯೋಜನ ವಿಸ್ತೀರ್ಣದ ಸಮುದ್ರವನ್ನು ದಾಟುವುದು ಸಾಧ್ಯವಿಲ್ಲವೆಂಬ ಸತ್ಯ ಹೊಳೆಯಿತು. ಎಷ್ಟೋ ಹೊತ್ತು ಸುಮ್ಮನೆ ಕುಳಿತಿದ್ದರು. ಹನುಮಂತನೂ ತನ್ನ ಶಕ್ತಿಯ ಬಗ್ಗೆ ಮರೆತು ಅಸಹಾಯಕನಾಗಿ ಕುಳಿತಿದ್ದ. ಆದರೆ ಜಾಂಬವಂತನಿಗೆ ಮಾತ್ರ ಈ ಕೆಲಸವನ್ನು ಮಾಡಬಲ್ಲ ಸಮರ್ಥ ಹನುಮಂತನೊಬ್ಬನೇ ಎನ್ನುವ ನಂಬಿಕೆಯಿತ್ತು. ಅದಕ್ಕಾಗಿಯೇ ಹನುಮಂತನಿಗೆ, "ಹನುಮ, ಎಲ್ಲರಂತೆ ನೀನೂ ನಿಸ್ಸಾಹಾಯನಾಗಿ ಕುಳಿತಿರುವೆಯಲ್ಲ! ನಿನ್ನ ಹಿಂದಿನ ಪರಾಕ್ರಮಗಳನ್ನು ಒಮ್ಮೆ ನೆನಪಿಸಿಕೋ. ನೀನು ಬಾಲಕನಾಗಿದ್ದಾಗ ಆಕಾಶದಲ್ಲಿ ಹೊಳೆಯುತ್ತಿದ್ದ ಕೆಂಪು ಸೂರ್ಯನನ್ನು ಹಣ್ಣೆಂದು ಭಾವಿಸಿ, ಜಿಗಿದು ಅದನ್ನು ಕಿತ್ತುಕೊಳ್ಳಬೇಕೆಂದು ಪ್ರಯತ್ನಿಸಿದೆ. ನಿನ್ನ ಈ ಸಾಹಸನೋಡಿ ಇಂದ್ರ ಹೆದರಿದ. ಸೂರ್ಯನನ್ನು ನಿನ್ನಿಂದ ರಕ್ಷಿಸಲು ನಿನ್ನ ಮೇಲೆ ಆಕ್ರಮಣ ಮಾಡಿದ. ತನ್ನ ವಜ್ರಾಯುಧದಿಂದ ನಿನ್ನ ದವಡೆಯ ಮೇಲೆ ಪ್ರಹಾರ ಮಾಡಿ, ಮುರಿದ, ಇದನ್ನು ಕಂಡು ನಿನ್ನ ತಂದೆ ಚಲಿಸುವುದನ್ನು ನಿಲ್ಲಿಸಿಬಿಟ್ಟ. ಗಾಳಿ ಇಲ್ಲದೆ ಪ್ರಪಚಂದ ಉಸಿರು ಕಟ್ಟಿ ಸಾಯುವ ಸ್ಥಿತಿಗೆ ಬಂತು. ಬ್ರಹ್ಮ, ಇಂದ್ರರಿಬ್ಬರೂ ನಿನ್ನ ತಂದೆಯಲ್ಲಿಗೆ ಬಂದು, ಪ್ರಾರ್ಥಿಸಿದರು. ಕೋಪವನ್ನು ಬಿಟ್ಟು ಮೊದಲಿನಂತೆ ಚಲನಶೀಲನಾಗಬೇಕೆಂದು ಕೇಳಿಕೊಂಡರು. ಪ್ರತಿಯಾಗಿ ನಿನ್ನನ್ನು ಚಿರಂಜೀವಿಯಾಗಿರು ಎಂದು ಆಶೀರ್ವದಿಸಿದರು. ನೀನಾಗಿ ಸಾವನ್ನು ಬಯಸುವವರೆಗೂ ಯಾರಿಂದಲೂ ಯಾವುದೇ ಆಯುಧದಿಂದಲೂ ನಿನ್ನ ಸಾವು ಸಾಧ್ಯವಾಗುವುದಿಲ್ಲ ಎಂದು ವರವನ್ನೂ ಕೊಟ್ಟರು. ನೀನು

ಚಿರಂಜೀವಿ; ವಾಯುಪುತ್ರ; ಮಹಾಬಲಶಾಲಿ; ನಿನಗೆ ಸಾಧ್ಯವಾಗದ್ದು ಯಾವುದೂ ಇಲ್ಲ. ಆದ್ದರಿಂದ ನಮ್ಮ ಗುರಿ ಸಾಧನೆ ನಿನ್ನೊಬ್ಬನಿಂದ ಮಾತ್ರ ಸಾಧ್ಯ. ಏಳುಹನುಮಂತ ಅಧೈರ್ಯ, ಆಲಸ್ಯಗಳನ್ನೆಸೆದು ನಿಲ್ಲು. ನಿನ್ನನ್ನು ನೀನು ಗುರುತಿಸಿಕೋ" ಎಂದು ಅವನನ್ನು ಹೊಗಳಿ ಅವನ ಸಾಮರ್ಥ್ಯವನ್ನು ತಿಳಿಸಿಕೊಟ್ಟ ಮೇಲೆ ಒಮ್ಮೆಲೇ ಹನುಮಂತ ದೈತ್ಯಾಕಾರವಾಗಿ ಬೆಳೆದು ಮೈಕೊಡವಿಕೊಂಡು ಮೇಲಕ್ಕೆ ಜಿಗಿದ. ಎಲ್ಲರೂ ರೋಮಾಂಚನಗೊಂಡರು. ದಿಗ್ಭ್ರಮೆಯಿಂದ ಆಕಾಶದೆಡೆಗೆ ಮುಖಮಾಡಿ ನೋಡತೊಡಗಿದರು. ಮಹೇಂದ್ರ ಪರ್ವತದ ಮೇಲಿನಿಂದ ನೆಗೆದು ಲಂಕೆಯತ್ತ ಹಾರಿದ.

ಅವನ ಹಾದಿಯಲ್ಲಿ ಅನೇಕ ಅಡ್ಡಿ ಆತಂಕಗಳು ಎದುರಾದವು. ಆದರೆ ಹನುಮಂತನಿಗೆ ಅದೆಲ್ಲವನ್ನೂ ಎದುರಿಸಿ ಹೋಗುವುದು ಅಷ್ಟೇನೂ ಕಷ್ಟವೆನಿಸಲಿಲ್ಲ. ಸ್ವಲ್ಪ ಮುಂದೆ ಹೋದಂತೆ ಸುರಸಾ ಎಂಬ ರಾಕ್ಷಸಿಯೊಬ್ಬಳು ಅವನಿಗೆ ಅಡ್ಡವಾದಳು. ದೊಡ್ಡದಾಗಿ ಬಾಯಿ ತೆರೆದು ಹನುಮಂತನನ್ನು ನುಂಗಲು ಪ್ರಯತ್ನಿಸಿದಳು. ಹನುಮಂತನೂ ಅದಕ್ಕೆ ತಕ್ಕಂತೆ ಬೆಳೆದು ಒಳಹೋಗುವಾಗ ಮಾತ್ರ ಅತ್ಯಂತ ಕಿರಿದಾದ ಗಾತ್ರವಾಗಿ ಒಳಗೆ ಹೊಕ್ಕು ಸುಲಭವಾಗಿ ಹೊರಗೆ ಬಂದ. ಅವನ ಜಾಣ್ಮೆಗೆ ಸುರಸಾ



ಸಂತೋಷಗೊಂಡಳು. ಅವನಿಗೆ ಒಳ್ಳೆಯದಾಗಲೆಂದು ಹೇಳಿ ಸಮುದ್ರದಲ್ಲಿ ಅದೃಶ್ಯಳಾದಳು.

ಇದೇ ರೀತಿಯಲ್ಲಿ ಇನ್ನೂ ಅನೇಕ ಕಷ್ಟಗಳು ಬಂದರೂ, ಅವೆಲ್ಲವನ್ನು ಹನುಮಂತ ಸುಲಭವಾಗಿ ಜಯಿಸಿದ ಹಾಗೂ ಹೀಗೂ ಕಡೆಗೆ ಲಂಕಾ ನಗರವನ್ನು ತಲುಪಿದ. ಲಂಕೆಯ ಸಿರಿಸಂಪತ್ತು, ಅಂದಚೆಂದಗಳು, ಚಿನ್ನದ ಅರಮನೆಗಳು, ಅಮೂಲ್ಯ ಮಣಿಗಳಿಂದಾದ ತೋರಣಗಳು, ಕೋದ ರಸ್ತೆಗಳು!!! ಅದ್ಭುತವಾದ ಚೆಲುವಿನಿಂದ ಕಣ್ಣಿಗೆ ತಂಪನ್ನು ನೀಡುವ ವನಗಳು, ಉದ್ಯಾನಗಳು!! ನೋಡಿದಷ್ಟೂ ನೋಡಬೇಕೆನಿಸುವಷ್ಟು ಸುಂದರವಾಗಿದ್ದವು. ಇಂದ್ರನಗರಿ ಅಮರಾವತಿಯೆಂಬಂತೆ ಕಾಣುತ್ತಿತ್ತು. ಒಂದು ಸುತ್ತು ಸುತ್ತಿ ಬಂದ.



ಸೀತೆಯನ್ನು ಇಷ್ಟು ದೊಡ್ಡ ನಗರದಲ್ಲಿ ಇಷ್ಟೊಂದು ಅರಮನೆಗಳಲ್ಲಿ ಹೇಗೆ ಹುಡುಕುವುದು? ಎನಿಸಿತು. ಕತ್ತಲಾಗುವವರೆಗೂ ಕಾದ. ನಂತರ ಎಲ್ಲ ಸ್ಥಳಗಳಲ್ಲಿ, ಅರಮನೆಗಳಲ್ಲಿ ಅದೃಶ್ಯರೂಪದಲ್ಲಿ ಹೊಕ್ಕು ಹುಡುಕಾಡಿದ. ಆದರೆ ಎಲ್ಲೂ ಸೀತೆ ಕಾಣಲಿಲ್ಲ. ಎತ್ತರವಾದ ಪ್ರಾಕಾರದ ಗೋಡೆಯ ಮೇಲೆ ಕುಳಿತು ಸೂಕ್ಷ್ಮವಾಗಿ ಕಣ್ಣಾಡಿಸಿದ. ತಕ್ಷಣ ಅವನಿಗೆ ವನಗಳನ್ನು

ತೋಟಗಳನ್ನು ಮರೆತದ್ದು ನೆನಪಾಗಿ, ತಕ್ಷಣವೇ ಅಲ್ಲಿಗೆ ಹೊರಟ. ಅವುಗಳಲ್ಲೆಲ್ಲ ಅಡ್ಡಾಡಿದ. ಕಡೆಗೆ ಒಂದು ಸುಂದರವಾದ ವನ ಕಾಣಿಸಿತು. ಅಲ್ಲಿ ಮಧ್ಯದಲ್ಲಿ ಅಶೋಕ ವೃಕ್ಷದ ಕೆಳಗೆ ಯಾರೋ ಹೆಂಗಸು ಕುಳಿತದ್ದು ಕಾಣಿಸಿತು. ಸೀತೆಯಿರಬಹುದೇ ಎಂದು ಅನುಮಾನಿಸಿದ. ಹತ್ತಿರ ಹೋಗಿ ಗಮನಿಸಲು ಆ ಹೆಂಗಸು ದೈನ್ಯಳಾಗಿ, ದುಃಖಿಸುತ್ತಾ ಕುಳಿತಿದ್ದುದನ್ನು ನೋಡಿ ಅವಳೇ ಸೀತೆಯಿರಬೇಕೆನಿಸಿತು. ರಾಮ ಧ್ಯಾನ ಮಾಡತೊಡಗಿದ. 'ರಾಮ' ಶಬ್ದ ಕಿವಿ ಮೇಲೆ ಬಿದ್ದ ಕೂಡಲೇ ಹಿಂತಿರುಗಿ ನೋಡಿದಳು. ಹನುಮಂತನಿಗೆ ಅವಳು ಸೀತೆ ಎಂದು ಖಚಿತವಾಯಿತು. ಹೋಗಿ ಅವಳ ಎದುರು ನಿಂತು ಕೈಜೋಡಿಸಿ ವಿನಯದಿಂದ ತನ್ನ ಪರಿಚಯ ಹೇಳಿದ. ರಾಮನ ವಿಚಾರವನ್ನೆಲ್ಲ ತಿಳಿಸಿದ. ಅವನ ಪರವಾಗಿ ತಾನು ಬಂದಿದ್ದೇನೆಂದು ತಿಳಿಸಿ ರಾಮನು ಕೊಟ್ಟಿದ್ದ ಉಂಗುರವನ್ನು ತೋರಿಸಿದ. ಸೀತೆಯೂ ತನ್ನ ದುಃಖವನ್ನೆಲ್ಲಾ ಹೇಳಿಕೊಂಡಳು.

"ದುಷ್ಟ ರಾವಣನ ಕೈಯಿಂದ ಆದಷ್ಟು ಬೇಗ ನನ್ನನ್ನು ಬಿಡಿಸಿ ಕರೆದುಕೊಂಡು ಹೋಗಲು ಹೇಳು. ಪ್ರತಿಕ್ಷಣವೂ ನನಗೆ ನನ್ನ ಸ್ವಾಮಿಯ ನೆನಪಾಗುತ್ತಿದೆಯೆಂದು ತಿಳಿಸು" ಎಂದು ಹನುಮಂತನಿಗೆ ಹೇಳಿದಳು.

"ತಾಯಿ, ರಾಮ, ಲಕ್ಷ್ಮಣರ ಬಗ್ಗೆ ನಿಶ್ಚಿಂತೆಯಿಂದ ಇರಿ. ಈಗ ಅವರು ಸೌಖ್ಯವಾಗಿದ್ದಾರೆ. ಕಿಷ್ಕಿಂಧೆಯ ಸುಗ್ರೀವನ ಸ್ನೇಹ. ಸಹಾಯಗಳು ದೊರೆತಿವೆ. ಆದಷ್ಟು ಬೇಗ ನಿಮ್ಮನ್ನು ಇಲ್ಲಿಂದ ಕರೆದುಕೊಂಡು ಹೋಗಬೇಕೆನ್ನುವುದೇ ಅವರ ಚಿಂತೆಯಾಗಿದೆ. ಆದ್ದರಿಂದಲೇ ನನ್ನನ್ನು ನಿಮ್ಮನ್ನು ಹುಡುಕಿ ಈ ಸಂದೇಶವನ್ನು ನಿಮಗೆ ಹೇಳಲು ಇಲ್ಲಿಗೆ ಕಳಿಸಿದ್ದಾರೆ" ಎಂದು ತಾನು ಬಂದ ಉದ್ದೇಶವನ್ನು ವಿವರಿಸಿ ಹೇಳಿದ.

ಸೀತೆಗೆ ಸಂತೋಷವಾಯಿತು. ಸ್ವಲ್ಪ ಧೈರ್ಯ ಬಂತು. ಆದರೆ ಮರುಗಳಿಗೆಯಲ್ಲಿಯೇ ಇದೆಲ್ಲ ರಾಕ್ಷಸ ಮಾಯೆ ಇರಬಹುದೇ ಎಂಬ ಅನುಮಾನ ಬಂತಾದರೂ ಉಂಗುರವನ್ನು ತೋರಿಸಿರಲು ಇನ್ನೆಲ್ಲಿಯ ಅನುಮಾನ ಎಂದು ತನ್ನನ್ನು ತಾನೇ ಸಮಾಧಾನ ಪಡಿಸಿಕೊಂಡಳು. ತನ್ನ ಚೂಡಾಮಣಿಯನ್ನು ಬಿಚ್ಚಿ ಹನುಮಂತನ ಕೈಗೆ ಕೊಡುತ್ತಾ, "ಮಗು

ಇದನ್ನು ನನ್ನ ಸ್ವಾಮಿಗೆ ಕೊಡು. ನನ್ನ ಪ್ರೀತಿಯನ್ನು ತಿಳಿಸು. ಲಕ್ಷ್ಮಣನಿಗೆ ಅತ್ತಿಗೆಯ ಆಶೀರ್ವಾದಗಳನ್ನು ಹೇಳು. ಅವರು ಬರುವ ಕ್ಷಣಗಳಿಗಾಗಿ ಕಾಯುತ್ತಿರುತ್ತೇನೆಂದು ತಿಳಿಸು. ಹೋಗಿ ಬಾ ಮಗು. ನಿನಗೆ ಕ್ಷೇಮವಾಗಲಿ" ಎಂದು ಹರಸಿದಳು.

ಹನುಮಂತ ಮತ್ತೊಮ್ಮೆ ರಾಮ, ಲಕ್ಷ್ಮಣ, ಸುಗ್ರೀವಾದಿಗಳು ಆದಷ್ಟು ಬೇಗ ಬಂದು ದುಷ್ಟರಾವಣನನ್ನು ಕೊಂದು, ಅವಳನ್ನು ಬಿಡಿಸಿಕೊಂಡು ಹೋಗುತ್ತಾರೆಂದು ಭರವಸೆ ಹೇಳಿ ಹೊರಟ.

ಲಂಕೆಯನ್ನು ಬಿಟ್ಟು ಹೊರಡುವ ಮೊದಲು, ರಾವಣನ ಶಕ್ತಿ, ಸಾಮರ್ಥ್ಯಗಳನ್ನು ತಿಳಿಯುವ ಮನಸ್ಸಾಯಿತು. ಹಾಗೆಯೇ ರಾವಣನಿಗೆ ರಾಮನ ಸಾಹಸ, ಶಕ್ತಿಗಳ ಬಗ್ಗೆ ಪರಿಚಯ ಮಾಡಿಸಬೇಕೆನಿಸಿತು. ಅದಕ್ಕಾಗಿ ಅವನು ಅವರೆಲ್ಲರ ಗಮನ ಸೆಳೆಯಲು ಮರ, ಗಿಡ, ವನ, ತೋಟಗಳನ್ನು ಹಾಳು ಮಾಡಲು ತೊಡಗಿದ. ಕಾವಲು ರಾಕ್ಷಸರು ಅವನನ್ನು ಹಿಡಿಯಲು ಪ್ರಯತ್ನಿಸಿದರು. ಆದರೆ ಯಾರ ಕೈಗೂ ಸಿಗದೆ ನುಣುಚಿಕೊಳ್ಳುತ್ತಾ ಹೋದ. ಅವರಿಗೆ ಇವನನ್ನು ಹಿಡಿಯಲು ಸಾಧ್ಯವಾಗದಿದ್ದಾಗ ರಾವಣನಲ್ಲಿಗೆ ಹೋಗಿ ಹನುಮಂತನ ಬಗ್ಗೆ ದೂರಿತ್ತರು. ರಾವಣ ಇದನ್ನು ಕೇಳಿ ಹೌಹಾರಿದ. ಕೋಪದಿಂದ ಅಬ್ಬರಿಸಿದ. ಕಡೆಗೆ ಇಂದ್ರ ಜಿತನನ್ನು ಕಳಿಸಿ, ಸೆರೆ ಹಿಡಿದು ತರಿಸಿದ. ಇಂದ್ರಜಿತನ ಬ್ರಹ್ಮಾಸ್ತ್ರದಿಂದ ಹನುಮಂತ ತಪ್ಪಿಸಿಕೊಳ್ಳ ಬಹುದಾಗಿದ್ದರೂ, ಉದ್ದೇಶ ಪೂರ್ವಕವಾಗಿಯೇ ಸೆರೆಯಾದ.

ಹನುಮಂತನನ್ನು ರಾವಣನ ಸಭೆಗೆ ತಂದರು. ರಾವಣ ಹನುಮಂತನಿಗೆ ಮರ್ಯಾದೆ ಮಾಡಲಿಲ್ಲ. ಆದರೆ ಹನುಮಂತ ತಾನೇ ತನ್ನ ಬಾಲವನ್ನು ಉದ್ದಕ್ಕೆ ಬೆಳೆಸಿ ಸುತ್ತಿ ಸುತ್ತಿ ಎತ್ತರದ ಗೋಪುರದಂತೆ ಮಾಡಿ ಅದರ ಮೇಲೆ ಕುಳಿತ, "ಎಲೈ ರಾವಣ ನಾನು ಯಾರೆಂದು ನಿನಗೆ ಅನುಮಾನ ಬೇಡ. ನಾನು ಹನುಮಂತ, ಕಿಷ್ಕಿಂಧೆಯ ಅರಸ ಸುಗ್ರೀವನ ಮುಖ್ಯಮಂತ್ರಿ. ಆದರೆ ಶ್ರೀರಾಮನ ಸೇವಕ. ಈಗ ಸಂದೇಶವಾಹಕ. ಶ್ರೀರಮನ ಸತಿಯಾದ ಸೀತಾಮಾತೆಯನ್ನು ಹೊತ್ತು ತಂದು ಬಹಳ ದೊಡ್ಡ ಅಪರಾಧ ಮಾಡಿರುವಿ.

ಪರಸ್ತ್ರೀಯನ್ನು ಹೀಗೆ ಮೋಹಿಸಿ ಬಲಾತ್ಕರಿಸುವುದು ನಿನ್ನಂಥವನಿಗೆ ಉಚಿತವಲ್ಲ. ಆದ್ದರಿಂದ ಮರ್ಯಾದೆಯಿಂದ ನೀನಾಗಿ ಆಕೆಯನ್ನು ರಾಮನಿಗೆ ಒಪ್ಪಿಸಿ ಶರಣಾಗತನಾಗು, ಇಲ್ಲವಾದಲ್ಲಿ ನಿನ್ನ ವಿನಾಶಕ್ಕೆ ಸಿದ್ಧನಾಗು" ಎಂದನು.

ಕೋತಿಯೊಂದರಿಂದ ಹೀಗೆ ಉಪದೇಶ ಕೇಳಬೇಕಾಗಿ ಬಂದುದರಿಂದ ಅವನ ಕೋಪ ನೆತ್ತಿಗೇರಿತು. ಕೂಡಲೇ ಅವನನ್ನು ಕೊಲ್ಲುವಂತೆ ಆಜ್ಞಾಪಿಸಿದ. ಆದರೆ ವಿಭೀಷಣ ಮಧ್ಯೆ ಪ್ರವೇಶಿಸಿ, ದೂತನಾಗಿ ಬಂದವನನ್ನು ಕೊಲ್ಲುವುದು ನ್ಯಾಯವಲ್ಲವೆಂದು ಬುದ್ಧಿ ಹೇಳಿದ. ರಾವಣ ಸ್ವಲ್ಪ ಹೊತ್ತು ಯೋಚಿಸಿ, ವಾನರರಿಗೆ ಎಲ್ಲಕ್ಕಿಂತ ಮುಖ್ಯವಾದ ಅಂಗ ಬಾಲವಾದ್ದರಿಂದ, ಅದನ್ನೇ ಹಾಳು ಮಾಡಿದರೆ ಸಾಕೆನಿಸಿ, ಭಟರನ್ನು ಕರೆದು ಬಾಲಕ್ಕೆ ಬೆಂಕಿ ಹಚ್ಚಲು ಹೇಳಿದ.

ಕೂಡಲೇ ಅನುಚರರು ಹನುಮಂತನ ಬಾಲಕ್ಕೆ ಬಟ್ಟೆ ಸುತ್ತಿ, ಎಣ್ಣೆಯಲ್ಲಿ ಅದ್ದಿ ಬೆಂಕಿ ಹಚ್ಚಿದರು. ಹನುಮಂತ ಇದಾವುದರ ಬಗ್ಗೆ ಗಮನವಿಲ್ಲದೆ ಎಲ್ಲ ಕಡೆಗೆ ಹರಿದಾಡಿ ಕಂಡ ಕಂಡದ್ದಕ್ಕೆಲ್ಲ ಬೆಂಕಿ ಹಚ್ಚ ತೊಡಗಿದ. ಇಡೀ ಲಂಕೆಯೇ ಹತ್ತಿಕೊಂಡು ಉರಿಯತೊಡಗಿತು.

ಹನುಮಂತನು ಮಾಡಬಹುದಾದ ಅನಾಹುತ ಮಾಡಿದ. ಇದ್ದಕ್ಕಿದ್ದಂತೆ ಸೀತೆಯು ನೆನಪಾಗಿ ಹೆದರಿದ. ತಾನು ಮಾಡಿದ ಕೆಲಸದಿಂದ ಅವಳಿಗೇನಾದರೂ ಅಪಾಯವಾಗಿರಬಹುದೇ ಎಂದು ಹೆದರಿ, ಅಲ್ಲಿಗೆ ಹೋಗಿ ನೋಡಿದ. ಸೀತೆ ಸುರಕ್ಷಿತವಾಗಿರುವುದನ್ನು ಕಂಡು ಖುಷಿ ಪಟ್ಟ. ತನ್ನ ಕೆಲಸ ಮುಗಿಸಿ, ಎಲ್ಲರೂ ಇದ್ದ ಸಮುದ್ರ ತೀರಕ್ಕೆ ಬಂದ. ಇವನಿಗಾಗಿ ಕಾಯುತ್ತಿದ್ದವರು, ಇವನ್ನು ಕಂಡ ಕೂಡಲೇ ಉತ್ಸಾಹದಿಂದ ಜಯಘೋಷ ಮಾಡಿದರು. ಹನುಮಂತ ಕೆಲಸ ಸಾಧಿಸಿರುವುದು ಅವನನ್ನು ನೋಡಿಯೇ ಅರ್ಥಮಾಡಿಕೊಂಡರು.

ಜಾಂಬವಂತ ಅಂಗದರಿಗೆ ಎಲ್ಲವನ್ನೂ ವಿವರಿಸಿ ತಿಳಿಸಿದ. ಹುಡುಕಲು ಹೊರಟು ಬಂದಿದ್ದ ವಾನರ ಸೈನ್ಯವೆಲ್ಲ ಕಿಷ್ಕಿಂಧೆಯತ್ತ ಪ್ರಯಾಣ ಬೆಳೆಸಿತು. ಸುಗ್ರೀವನ ರಾಜ್ಯೋದ್ಯಾನದಲ್ಲಿ ವಿಶ್ರಮಿಸಿ, ನಂತರ ರಾಮನನ್ನು ಕಾಣಲು

ಹನುಮಂತ, ಅಂಗದ, ಜಾಂಬವಂತ ಮೊದಲಾದ ಸೇನಾ ಮುಖ್ಯರು ಹೊರಟರು.

ಸಭೆಯಲ್ಲಿ ರಾಮ, ಲಕ್ಷ್ಮಣ, ಸುಗ್ರೀವಾದಿಗಳು ಕುಳಿತಿದ್ದರು. ಇವರನ್ನು ನೋಡಿ ಅವರೆಲ್ಲ ಸಂತೋಷಪಟ್ಟರು. ಹನುಮಂತನ ಸಾಹಸ, ಶಕ್ತಿ, ಸಾಮರ್ಥ್ಯ, ಬುದ್ಧಿಯ ಬಗ್ಗೆ ಹೆಮ್ಮೆ ಎನಿಸಿತು. ರಾಮ ಸೀತೆಯ ಬಗ್ಗೆ ಹನುಮಂತನನ್ನು ವಿಚಾರಿಸಿದ. ಹನುಮಂತ ತಾನು ಅಲ್ಲಿಗೆ ಹೋದಾಗಿನಿಂದ ಬರುವವರೆಗೆ ನಡೆದುದೆಲ್ಲವನ್ನು ವಿವರಿಸಿ, ಸೀತೆಯ ಸಂದೇಶವನ್ನು ತಿಳಿಸಿ, ಆಕೆ ಕೊಟ್ಟ ಚೂಡಾಮಣಿಯನ್ನು ರಾಮನ ಕೈಗೆ ಇರಿಸಿದ. ಅದನ್ನು ನೋಡುತ್ತಿದ್ದಂತೆ ಕಣ್ಣು ತೇವಗೊಂಡಿತು. ಅವಳೊಡನೆ ಕಳೆದ ಕ್ಷಣಗಳು ನೆನಪಾದವು. ಆದಷ್ಟು ಬೇಗ ಲಂಕೆಗೆ ಪ್ರಯಾಣ ಬೆಳೆಸಿ, ರಾವಣ ಸಂಹಾರ ಮಾಡಿ ಅವಳನ್ನು ಕರೆದು ತರಲು ಆತುರ ಪಟ್ಟರಾದರೂ, ಅಷ್ಟೂ ಸೈನ್ಯ ಸಮುದ್ರವನ್ನು ದಾಟಿ ಲಂಕೆ ತಲುಪುವುದು ಹೇಗೆಂಬುದೇ ಅವರಿಗೆ ದೊಡ್ಡ ಸಮಸ್ಯೆ ಎನಿಸಿತು.



## ಲಂಕೆಯತ್ತ ಪ್ರಯಾಣ – ರಾಮ – ರಾವಣರ ಯುದ್ಧದ ಸಿದ್ಧತೆ

ಹನುಮಂತ ಸೀತೆಯನ್ನು ಕಂಡು ಬಂದದ್ದು ರಾಮನಿಗೆ ಸಂತೋಷ ವೆನಿಸಿತು. ಸೀತೆ ಸುರಕ್ಷಿತವಾಗಿ, ಜೀವಂತವಾಗಿ ಇದ್ದಾಳೆಂಬ ಸಂಗತಿಯೇ ಅವನಿಗೆ ನೆಮ್ಮದಿಯೆನಿಸಿತು. ತನ್ನವರ ಕಾರ್ಯದ ಯಶಸ್ಸನ್ನು ಕಂಡು ಸುಗ್ರೀವನಿಗೂ ಹೆಮ್ಮೆಯೆನಿಸಿ ಅವರೆಲ್ಲರನ್ನೂ ಸಂತೋಷದಿಂದ ಬರಮಾಡಿಕೊಂಡ. ಹನುಮಂತನಿಂದ ರಾವಣನ ಬಲಾಬಲಗಳು, ಲಂಕೆಯ ನಕ್ಷೆ, ಕೋಟೆ ಕೊತ್ತಲಗಳು, ಸೈನ್ಯದ ಪ್ರಮಾಣ ಮೊದಲಾಗಿ ಎಲ್ಲಕ್ಕೂ ಸಂಬಂಧಿಸಿದಂತೆ ವಿವರಗಳನ್ನು ಕೇಳಿ ಸಂಗ್ರಹಿಸಿದ.

ರಾಮ ಸಮುದ್ರವನ್ನು ದಾಟುವುದರ ಬಗ್ಗೆ ಇನ್ನೂ ಚಿಂತಿತನಾಗಿ ಇರುವುದನ್ನು ಗಮನಿಸಿದ. ಮೊದಲು ತನಗೂ ಅವಮಾನವಿತ್ತು, ಸಮಸ್ಯೆಯಾಗಿ ಕಾಡಿತ್ತು. ಆದರೆ ಈಗ ಆತ್ಮವಿಶ್ವಾಸವನ್ನು ಮೂಡಿಸಿಕೊಂಡಿದ್ದ. ಹೇಗೋ ಆಗುತ್ತದೆ ಎನ್ನುವ ಭರವಸೆಯನ್ನು ತುಂಬಿಕೊಂಡಿದ್ದ. ಆದ್ದರಿಂದ ಅವನು ರಾಮನಿಗೆ, "ಗೆಳೆಯಾ ನಿನ್ನ ಸಮಸ್ಯೆ ನನ್ನ ಸಮಸ್ಯೆಯೂ ಆಗಿದೆ. ಆದರೆ ಅದರ ಬಗ್ಗೆ ಇಷ್ಟೊಂದು ಯೋಚನೆ ಮಾಡುವ ಅಗತ್ಯವಿಲ್ಲ. ಹನುಮಂತನನ್ನು ಕಂಡಿರುವೆಯಲ್ಲ. ಈಗ ಅವನು ಸಹಸ್ರಯೋಜನ ವಿಸ್ತೀರ್ಣವುಳ್ಳ ಸಮುದ್ರ ಲಂಘನ ಮಾಡಿ ನಿನ್ನ ಮಡದಿಯನ್ನು ಕಂಡು ಮಾತನಾಡಿಸಿ ಬಂದಿಲ್ಲವೇ? ಹಾಗೆಯೇ ನಾವೂ ಲಂಕೆಗೆ ಪ್ರಯಾಣ ಬೆಳೆಸೋಣ. ಹೋದಮೇಲೆ ಏನೋ ಒಂದು ದಾರಿ ಹೊಳೆಯದೆ ಇರುವುದಿಲ್ಲ. ಸೇತು ಬಂಧನ ಮಾಡಿ ಲಂಕೆಯನ್ನು ಸೇರೋಣ. ಅಂಗದ, ಜಾಂಬವಂತರೂ ಹನುಮಂತನ ಹಾಗೆ ಸಾಹಸಿಗಳು. ಅವರು ಮತ್ತು ನನ್ನ ಸೈನಿಕರು ಮನಸ್ಸು ಮಾಡಿದರೆ ಯಾವುದನ್ನಾದರೂ ಸಾಧಿಸಬಲ್ಲರು ಎಂಬ ನಂಬಿಕೆ

ನನಗಿದೆ. ಪ್ರಾಣವನ್ನು ಬಿಡಲೂ ಅವರ ಹಿಂಜರಿಯುವುದಿಲ್ಲ. ಹನುಮಂತ ಲಂಕೆಗೆ ಪ್ರವೇಶ ಮಾಡಿದನೆಂದರೆ ಇನ್ನು ಅದರ ಕತೆ ಮುಗಿದಂತೆಯೇ!! ನನ್ನವರು ನಿಮ್ಮನ್ನು ಹೇಗಾದರೂ ಮಾಡಿ ಲಂಕೆಗೆ ಸೇರಿಸುತ್ತಾರೆ.

ಸುಗ್ರೀವನ ಮಾತುಗಳನ್ನು ಕೇಳಿದ ಮೇಲೆ ಸ್ವಲ್ಪ ಸಮಾಧಾನವಾಯಿತು. ಮತ್ತೊಂದು ಬಾರಿ ಎಲ್ಲರೂ ಸಭೆ ಸೇರಿ ಲಂಕೆಗೆ ಪ್ರಯಾಣ ಬೆಳೆಸಲು ದಿನವನ್ನು ಗೊತ್ತು ಮಾಡಿದರು.

ನಿಶ್ಚಿತವಾದ ದಿನದಂದು ರಾಮ, ಸುಗ್ರೀವರು ಕಾರ್ಯ ಪ್ರವೃತ್ತರಾದರು. ರಾಮ, ಲಕ್ಷ್ಮಣರನ್ನು ವಾನರರು ತಮ್ಮ ಹೆಗಲ ಮೇಲೆ ಹೊತ್ತು ನಡೆದರು. ವಾನರ ಸೈನ್ಯ ಇವರನ್ನು ಹಿಂಬಾಲಿಸಿತು. ಒಂದೆರಡು ದಿನಗಳು ಪ್ರಯಾಣ ಮಾಡಿ ಕಡೆಗೆ ಸಮುದ್ರ ತೀರವನ್ನು ತಲುಪಿದರು. ವಾನರರಲ್ಲಿ ಇದ್ದ ಉತ್ಸಾಹವನ್ನು ನೋಡಿ ರಾಮನಿಗೆ ಸಂತೋಷವಾಯಿತು. ಜೊತೆಯಲ್ಲಿಯೇ ಈ ಅತಿ ಉತ್ಸಾಹದ ಆವೇಶದಲ್ಲಿ ದಾರಿಯಲ್ಲಿ ಏನು ಅನಾಹುತಗಳನ್ನು ಮಾಡುತ್ತಾರೋ ಎಂದು ಹೆದರಿಕೆಯೂ ಆಯಿತು.

ಸಮುದ್ರ ತೀರವನ್ನು ತಲುಪಿ ಸ್ವಲ್ಪ ಹೊತ್ತು ಯೋಚನಾ ಮಗ್ನರಾದರು. ಅದನ್ನು ದಾಟಲು ಉಪಾಯಗಳ ಬಗ್ಗೆ ಚಿಂತಿಸತೊಡಗಿದರು.

ಇತ್ತ ಲಂಕೆಯಲ್ಲಿಯೂ ಸಭೆ ಸೇರಿ ಯುದ್ಧದ ಬಗ್ಗೆ ಚರ್ಚೆ ನಡೆಯಿತು. ಯುದ್ಧ ಅನಿವಾರ್ಯವೆಂದು ಅವರಿಗೂ ಅನಿಸಿತ್ತು. ಆದರೆ ಶತ್ರುಗಳ, ಅದರಲ್ಲೂ ರಾಮ, ಲಕ್ಷ್ಮಣ, ಹನುಮಂತನಂತಹವರ ಶಕ್ತಿ ಸಾಮರ್ಥ್ಯಗಳ ಬಗ್ಗೆ ಎಚ್ಚರಿಕೆಯಿಂದಿರಬೇಕೆಂಬುದು ಎಲ್ಲರ ಅಭಿಪ್ರಾಯವಾಗಿತ್ತು. ಅವರನ್ನು ಕಡೆಗಣಿಸುವುದೆಂದರೆ ಸಾವನ್ನು ಬಯಸಿದಂತೆ; ಇಲ್ಲವೆ ಬರಮಾಡಿಕೊಂಡಂತೆ. ಆದರೂ ಹನುಮಂತ ಮಾಡಿದ ಉತ್ಪಾತಗಳು ಉಂಟು ಮಾಡಿದ ನಷ್ಟ, ತೋರಿದ ಅಹಂಕಾರ ಇವೆಲ್ಲಕ್ಕೂ ಶಿಕ್ಷೆಯಾಗಲೇ ಬೇಕು; ತಕ್ಕಶಾಸ್ತಿ ಮಾಡಲೇಬೇಕು ಎಂಬುದು ಎಲ್ಲರ ಒಮ್ಮತದ ವಿಚಾರವಾಗಿತ್ತು. ಆದರೆ ವಿಭೀಷಣ ಮಾತ್ರ ಎಲ್ಲರಿಗಿಂತ ಭಿನ್ನವಾಗಿದ್ದ, ಆತುರದ ನಿರ್ಣಯಗಳಿಗೆ ಬರುವುದು ಅವನಿಗೆ ಸರಿ ಕಾಣಲಿಲ್ಲ. ತನ್ನನ್ನು ಬಿಟ್ಟು ಬೇರೆ ಎಲ್ಲ ಮಂತ್ರಿ ಮುಖ್ಯರೂ ತಮ್ಮ ರಾಜನನ್ನು ಮತ್ತಷ್ಟು

ಪ್ರಚೋದಿಸುತ್ತಿದ್ದಾರೆ, ಅಂತಹವುದರಲ್ಲಿ ತಾನು ಬುದ್ಧಿವಾದ ಹೇಳಿದರೆ ಕೇಳಿಸಿಕೊಳ್ಳುವಷ್ಟು ತಾಳ್ಮೆ ಇದೆಯೇ ಎಂದು ತನ್ನೊಳಗೇ ತರ್ಕ ಮಾಡಿದ.

ರಾವಣ, ಮಂತ್ರಿ ಪ್ರಮುಖರು, ಸೇನಾಪತಿಗಳು ತನ್ನ ಪೌರುಷ, ಪರಾಕ್ರಮಗಳನ್ನು, ದಿಗ್ವಿಜಯಗಳನ್ನು ಕೊಂಡಾಡುವುದನ್ನು ಕೇಳಿ ಉಬ್ಬಿ ಹೋಗಿದ್ದ. ಒಬ್ಬನಂತೂ, "ಮಹಾರಾಜ, ರಾಮ, ಲಕ್ಷ್ಮಣರಂತಹ ಮಾನವ ಕೀಟಗಳನ್ನು, ಕೋತಿಗಳನ್ನು ಧ್ವಂಸ ಮಾಡಲು ನೀವೇಕೆ ಹೋಗಬೇಕು? ನಿಮ್ಮ ಮಗ ಇಂದ್ರಜಿತ್ ಒಬ್ಬನೇ ಎಲ್ಲ ಸೈನ್ಯವನ್ನು ನಾಸ ಮಾಡಬಲ್ಲ. ಹಿಂದೆ ಅವನು ಮಾಡಿದ ಸಾಹಸಗಳು, ಗೆದ್ದ ಯುದ್ಧಗಳನ್ನು ನೆನಪಿಸಿಕೊಂಡರೆ ಅವನ ಸಾಮರ್ಥ್ಯ ನಿಮಗೇ ಅರ್ಥವಾಗುತ್ತದೆ. ನೀವು ಕೂಡಲೇ ಇಂದ್ರಜಿತನಿಗೆ ಆದೇಶ ಕೊಟ್ಟು ನೋಡಿ. ನಿಮಿಷ ಮಾತ್ರದಲ್ಲಿ ಅವರನ್ನು ಮುಗಿಸಿ ಬರುತ್ತಾನೆ" ಎಂದು ಹೊಗಳಿಕೆಯಿಂದ ಉಬ್ಬಿಸಿದರು. ಹೀಗೆಯೇ ಪ್ರಹಸ್ತ, ದುರ್ಮುಖ, ನಿಕುಂಬ ಮೊದಲಾದವರೆಲ್ಲರೂ ರಾವಣನನ್ನು ಯುದ್ಧಕ್ಕೆ ಪ್ರಚೋದಿಸುತ್ತಿದ್ದರು. ಅವನ ವಿಚಾರಗಳನ್ನು ಪುರಸ್ಕರಿಸುತ್ತಿದ್ದರು.

ವಿಭೀಷಣನಿಗೆ ಇನ್ನು ಕೇಳಿಸಿಕೊಳ್ಳುವ ಸಹನೆ ಇರಲಿಲ್ಲ. ಎದ್ದು ನಿಂತು, "ಅಣ್ಣಾ ಇವರೆಲ್ಲರೂ ಆಡುತ್ತಿರುವ ಮಾತುಗಳು ಕೇಳಿಸಿಕೊಳ್ಳಲು ಬಹಳ ಚೆನ್ನಾಗಿದೆ. ಆದರೆ ಅವುಗಳಂತೆ ನಡೆದುದೇ ಆದರೆ ನೀತಿಶಾಸ್ತ್ರದ ಉಲ್ಲಂಘನೆಯಾಗುತ್ತದೆ. ದಿಢೀರನೆ ಯುದ್ಧವನ್ನು ನಾವೇ ಘೋಷಿಸಿ ಮುಂದಾದರೆ ನಾವೆಲ್ಲರೂ ನಾಶವಾಗುತ್ತೇವೆ; ಲಂಕಾ ರಾಜ್ಯವೂ ಉಳಿಯುವುದಿಲ್ಲ. ಇಷ್ಟಕ್ಕೂ ರಾಮ ನಮಗೇನು ಅನ್ಯಾಯ ಮಾಡಿದ್ದಾನೆ? ಇನ್ನೂ ನಾವೇ ಅವನ ನಿರಪರಾಧಿ ಪತ್ನಿಯನ್ನು ಅಪಹರಿಸಿ ತಂದು ದೊಡ್ಡ ಅಪರಾಧ ಮಾಡಿದ್ದೇವೆ. ರಾಮನ ಮೇಲೆ ಯುದ್ಧ ಸಾರುವ ಮೊದಲು ನಮಗೆ ನಾವೇ ಪರೀಕ್ಷೆ ಮಾಡಿಕೊಳ್ಳಬೇಕು. ನಾವೇ ತಪ್ಪಿತಸ್ಥರಾಗಿದ್ದು ಅವರನ್ನು ದಂಡಿಸಲು ಹೋಗುವುದು ಸರಿಯಲ್ಲ' ಎಂದು ವಿನಯದಿಂದ ಹೇಳಿದ.

ರಾವಣ ತಮ್ಮನ ಮಾತನ್ನು ಕೇಳಿಸಿಕೊಂಡ. ಆದರೆ ಯಾವುದನ್ನೂ ನಿರ್ಧರಿಸಲಿಲ್ಲ. ಮರುದಿನ ಮತ್ತೊಂದು ಸಭೆ ಸೇರಿಸಿದ. ಹಿಂದಿನ ದಿನದಂತೆಯೇ ಚರ್ಚೆ, ಸಲಹೆಗಳು ಮುಂದುವರೆದವು. ವಿಭೀಷಣನ ಬುದ್ಧಿವಾದವೂ ಮುಂದುವರೆಯಿತು. ಅವನಂತು ಅಣ್ಣನನ್ನು, ಸೀತೆಯನ್ನು ರಾಮನಿಗೆ ಒಪ್ಪಿಸಿ ಶರಣಗತನಾಗುವಂತೆ, ಲಂಕಾರಾಜ್ಯವನ್ನು ಉಳಿಸಿಕೊಳ್ಳುವಂತೆ ಪರಿಪರಿಯಾಗಿ ಬೇಡಿಕೊಂಡ.

ರಾವಣನಿಗೆ ಬೇರೆಯವರ ಹೊಗಳಿಕೆಯ ಮಾತುಗಳು ಪ್ರಿಯವಾದವೇ ಹೊರತು ವಿಭೀಷಣನ ಬುದ್ಧಿವಾದ ಹಿಡಿಸಲಿಲ್ಲ. ಅವನೆಂದ, "ಇಲ್ಲ, ಇಲ್ಲ. ಸಾಧ್ಯವೇ ಇಲ್ಲ! ಸೀತೆಯನ್ನು ಅವರಿಗೆ ಒಪ್ಪಿಸುವುದೇ? ಅದೂ ಅವರಿಗೆ ಹೆದರಿಕೊಂಡು! ನನಗೆ ಅವರಿಂದ ಯಾವುದೇ ಭಯವಿಲ್ಲ. ನಿನ್ನುಪದೇಶದಿಂದ ನನ್ನನ್ನು ಹೇಡಿಯನ್ನಾಗಿ ಮಾಡಬೇಡ. ಇಲ್ಲಿಂದ ಹೊರಟು ಹೋಗು" ಎಂದು ಹೂಂಕರಿಸಿದ. ಇಲ್ಲಿಯವರೆಗೂ ಸೀತೆ ಅವನಿಗೆ ಒಲಿದಿರಲಿಲ್ಲ. ಅವನು ಹಾಕುವ ಬೆದರಿಕೆಗೂ ಸೋಲಲಿಲ್ಲ. ರಾವಣನೇ ಖುದ್ದಾಗಿ ಹೋಗಿ ಅವಳ ಮನಸ್ಸನ್ನು ತನ್ನೆಡೆಗೆ ತಿರುಗಿಸಲು ಪ್ರಯತ್ನಿಸಿದ. ತನ್ನ ಹೆಂಡತಿ ಮಂಡೋದರಿಯಿಂದಲೂ ಹೇಳಿಸಿದ. ಆದರೂ ಸೀತೆಯನ್ನು ಬಗ್ಗು ಬಡಿಯಲು ಆಗಲಿಲ್ಲ. ಸೀತೆಯಂತೂ ತನ್ನನ್ನೇನಾದರೂ ಬಲಾತ್ಕಾರ ಮಾಡಿದರೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದು ಹೆದರಿಸಿದ್ದಳು.

ಹನುಮಂತ ಬಂದು ಹೋದ ಮೇಲೆ, ರಾಮನು ಬರುವ ಗಳಿಗೆಗಳಿಗಾಗಿ ಕಾತುರದಿಂದ ಕಾಯುತ್ತಿದ್ದಳು. ನಿರಾಹಾರ ದೀಕ್ಷೆ ಹಿಡಿದು ಕುಳಿತಿದ್ದಳು.

ಈಗ ತನ್ನನ್ನು ಕಾವಲು ಕಾಯುತ್ತಿದ್ದ ರಾಕ್ಷಸಿಯರಿಂದ ರಾಮ, ಲಕ್ಷ್ಮಣರು ಖಂಡಿತವಾಗಿಯೂ ಬಂದು ಅವಳ ಸೆರೆ ಬಿಡಿಸುವರೆಂಬ ಸಾಂತ್ವನವೊಂದೇ ಅವಳಿಗೆ ಆಧಾರವಾಗಿತ್ತು. ವಿಭೀಷಣ ಅಣ್ಣನ ಕೋಪಕ್ಕೆ ಗುರಿಯಾಗಿ ರಾಮನಿದ್ದಲ್ಲಿಗೆ ಬಂದು ಶರಣಾಗತನಾದ. ಆದರೆ ಲಕ್ಷ್ಮಣನಿಗೆ ಅನುಮಾನ. ಅಣ್ಣನನ್ನು ಎಚ್ಚರಿಸಿದ. ಆದರೆ ರಾಮನಿಗೆ ವಿಭೀಷಣನ

ನಿಷ್ಠೆಯಲ್ಲಿ ನಂಬಿಕೆಯಿತ್ತು. ಅವನು ಗುಣವಂತ, ವಿಷ್ಣುಭಕ್ತನೆಂಬುದೂ ತಿಳಿದಿತ್ತು. ಆದ್ದರಿಂದಲೇ ನಂಬಿ ಅವನನ್ನು ತನ್ನೆಡೆಗೆ ಸೇರಿಸಿಕೊಂಡ.

ಸಮುದ್ರ ತೀರದಲ್ಲಿ ಬೀಡುಬಿಟ್ಟಿದ್ದ ಸುಗ್ರೀವನ ಸೈನ್ಯ, ರಾಮ, ಲಕ್ಷ್ಮಣಾದಿಗಳು ಸಮುದ್ರವನ್ನು ದಾಟಲು ಸಮುದ್ರರಾಜನ ಸಹಾಯ ಕೇಳುವ ಯೋಚನೆ ಮಾಡಿದರು. ರಾಮ ಮೂರು ದಿನಗಳ ಕಾಲ ಸಮುದ್ರರಾಜನನ್ನು ಪ್ರಾರ್ಥಿಸುತ್ತಾ ಕುಳಿತ. ಆದರೂ ಸಮುದ್ರರಾಜನ ದರ್ಶನವಾಗಲಿಲ್ಲ. ರಾಮನಿಗೆ ಕೋಪ ತಡೆಯಲಾಗಲಿಲ್ಲ. ದಂಡಿಸದೆ ಸಮುದ್ರರಾಜ ಬರಲಾರನೆಂದೆನಿಸಿ ಬಿಲ್ಲು ಬಾಣ ಹಿಡಿದು ನಿಂತ. ಇನ್ನೇನು ಬಾಣ ಬಿಡಬೇಕು, ಎಂದು ಕೊಳ್ಳುವಷ್ಟರಲ್ಲಿ ಸಮುದ್ರರಾಜ (ದೇವ) ಪ್ರತ್ಯಕ್ಷನಾದ. "ಭಗವಾನ್ ಶಾಂತನಾಗು. ಈ ಬಡಪಾಯಿಯ ಮೇಲೆ ಕೃಪೆಯಿಡು. ನನ್ನನ್ನು ಶಿಕ್ಷಿಸುವ ಮೊದಲು ನನ್ನ ಮಾತನ್ನು ಕೇಳಿಸಿಕೊ. ಪ್ರಕೃತಿಗೆ ವಿರುದ್ಧವಾಗಿ ನಾನು ಹೋಗಲಾರೆ. ಆದರೆ ನಿನ್ನ ಮಾರ್ಗ ಸುಲಭವಾಗುವಂತೆ ಮಾಡುತ್ತೇನೆ. ನಿನ್ನ ಸೈನ್ಯದ ಭಾರವನ್ನೆಲ್ಲಾ ನಾನು ಹೊರಲು ಸಿದ್ಧನಿದ್ದೇನೆ. ನಿನ್ನ ಸೈನ್ಯದಲ್ಲಿ ನೀಲ, ನಳ ಎಂಬ ಇಬ್ಬರು ವಾನರರು ಇದ್ದಾರೆ. ಸೇತುವೆಯ ನಿರ್ಮಾಣದಲ್ಲಿ ಬಳಸುವ ಪ್ರತಿಯೊಂದು



ವಸ್ತುವನ್ನೂ ಅವರು ಮುಟ್ಟಲಿ ಅವು ಮುಳುಗದೆ ತೇಲುತ್ತವೆ. ನಿಮಗೆ ಮುಳುಗುವ ಭಯವಿಲ್ಲದೆ ಸೇತುವೆಯ ಮೇಲೆ ನಡೆದು ಹೋಗಬಹುದು" ಎಂದು ಹೇಳಿ ನಮಸ್ಕರಿಸಿ ಸಮುದ್ರದಲ್ಲಿ ಮರೆಯಾದ.

ಮರುಕ್ಷಣವೇ ವಾನರರು ಸೇತುವೆ ಕಟ್ಟಲು ಬೇಕಾದ ಮರಗಿಡ, ಕಲ್ಲುಬಂಡೆಗಳು ಮತ್ತು ಇತರೆ ವಸ್ತುಗಳನ್ನು ತಂದು ತಂದು ನೀಲ, ನಳರಿಂದ ಮುಟ್ಟಿಸಿ ಸೇತುವೆ ನಿರ್ಮಾಣದಲ್ಲಿ ತೊಡಗಿದರು. ಕೇವಲ ಐದಾರು ದಿನಗಳಲ್ಲಿಯೇ ಸೇತುವೆ ಸಿದ್ಧವಾಯಿತು. ಸೈನ್ಯವೆಲ್ಲಾ ಸೇತುವೆಯ ಮೇಲಿಂದ ನಡೆದು ಲಂಕೆಯನ್ನು ತಲುಪಿದರು.

ಹನುಮಂತ, ಸುಗ್ರೀವರು ಶತ್ರು ಬಲಾಬಲಗಳ ಅಂದಾಜು ಲೆಕ್ಕವನ್ನು ರಾಮನಿಗೆ ಒಪ್ಪಿಸಿದರು. ರಾಮ ಸೈನ್ಯವನ್ನು ವಿವಿಧ ಗುಂಪುಗಳಲ್ಲಿ ಹಂಚಿದ ವಿಭೀಷಣನೂ ರಾಕ್ಷಸ ಸೈನ್ಯದ ಬಗ್ಗೆ ಕೆಲವು ವಿವರಗಳನ್ನು ನೀಡಿ, ಆ ಸೈನ್ಯದ ಅದ್ಭುತ ಶಕ್ತಿ ಸಾಮರ್ಥ್ಯಗಳನ್ನು ಬಣ್ಣಿಸಿದ. ಆದ್ದರಿಂದ ರಾಮ, ಯಾರು ಯಾರು ಸೈನ್ಯದ ಯಾವ ಯಾವ ಗುಂಪಿನ ನಾಯಕತ್ವ ವಹಿಸಬೇಕೆಂಬುದನ್ನು ವಿವರಿಸಿ ಹೇಳಿದ. ನೀಲ ಪ್ರಹಸ್ತನೊಂದಿಗೆ, ಅಂಗದ ಮಹಾಪಾರ್ಶ್ವ ಮಹೋದರರೊಂದಿಗೆ, ದಕ್ಷಿಣ ದ್ವಾರದಲ್ಲಿಯೂ ಹನುಮಂತ ಇಂದ್ರಜಿತ್‌ನೊಂದಿಗೆ ಪಶ್ಚಿಮದ್ವಾರದಲ್ಲಿಯೂ ಯುದ್ಧ ಮಾಡಬೇಕೆಂದು ತೀರ್ಮಾನವಾಯಿತು. ರಾವಣನನ್ನು ರಾಮ, ಲಕ್ಷ್ಮಣರು ಎದುರಿಸಲು ನಿರ್ಧರಿಸಿದರು. ಇನ್ನುಳಿದ ಸುಗ್ರೀವ, ಜಾಂಬವಂತ, ವಿಭೀಷಣರು ಮುಖ್ಯ ಸೈನ್ಯದ ಹಿಂದೆ ಇರಬೇಕೆಂದಾಯಿತು.



# ಯುದ್ಧ ಆರಂಭವಾಯಿತು

ವಾನರ ಸೈನ್ಯ ಸುವೇಲ ಪರ್ವತವಿಳಿದು ಲಂಕಾ ನಗರಕ್ಕೆ ಹೊಂದಿಕೊಂಡಂತೆ ಇದ್ದ ಕಾಡನ್ನು ಪ್ರವೇಶಿಸಿತು. ಪ್ರವಾಹದಂತೆ ನುಗ್ಗಿದ ಸೈನ್ಯವನ್ನು ಕಂಡು ಕಾಡಿನಲ್ಲಿದ್ದ ಪಶುಪಕ್ಷಿ ಪ್ರಾಣಿಗಳು ಹೆದರಿ ಚೆಲ್ಲಾಪಿಲ್ಲಿಯಾದವು.

ನಗರದ ಸೌಂದರ್ಯವನ್ನು ನೋಡಿ ರಾಮಲಕ್ಷ್ಮಣರು ನಿಬ್ಬೆರಗಾದರು. ತಾವು ಬಂದಿರುವ ವಿಷಯ ಸೀತೆಗೆ ತಿಳಿದರೆ ಎಷ್ಟು ಸಂತೋಷಿಸುತ್ತಾಳೋ ಎಂದು ರಾಮ ಮನಸ್ಸಿನಲ್ಲಿಯೇ ಯೋಚಿಸಿದ.

ಸುಗ್ರೀವ ಇದ್ದಕ್ಕಿದ್ದಂತೆ ಯಾರಿಗೂ ಹೇಳದೆ ಆಕಾಶಕ್ಕೆ ನೆಗೆದು ಲಂಕೆಯ ಎತ್ತರದ ಗೋಪುರದ ಮೇಲೆ ಇಳಿದು ಸುತ್ತಲೂ ನೋಡಿದ. ಕೆಂಪು ರಾಜಪೋಷಾಕನ್ನು ಧರಿಸಿ ಎತ್ತರದ ಪೀಠದ ಮೇಲೆ ಕುಳಿತಿದ್ದ ರಾವಣ ಕಣ್ಣಿಗೆ ಬಿದ್ದ. ಸುಗ್ರೀವನಿಗೆ ಸಂತೋಷವಾಯಿತು. ಒಮ್ಮೆಲೇ 'ಹಾ ಸಿಕ್ಕಿಬಿದ್ದೆ, ರಾವಣ' ಎಂದು ಉದ್ಗರಿಸಿತ್ತ ಅವನ ಮೇಲೆ ಬಿದ್ದ. ರಾವಣನ ಕಿರೀಟ ಹಾರಿ ಬಿತ್ತು. ಇಬ್ಬರೂ ಒಬ್ಬರ ಮೇಲೊಬ್ಬರೂ ಬಿದ್ದ ಮಲ್ಲಯುದ್ಧ ಮಾಡಿದರು. ಮಾಯಾ ಯುದ್ಧವೂ ನಡೆಯಿತು.

ಆದರೆ ಸುಗ್ರೀವನಿಗೆ ಇದರ ಪರಿಚಯವಿಲ್ಲವಾಗಿ ಹೇಗೋ ತಪ್ಪಿಸಿಕೊಂಡು ರಾಮನಿದ್ದಲ್ಲಿಗೆ ಬಂದು ಬಿಟ್ಟ.

ಸುಗ್ರೀವ ಸುರಕ್ಷಿತವಾಗಿ ಹಿಂತಿರುಗಿದ್ದಕ್ಕೆ ಎಲ್ಲರಿಗೂ ಸಮಾಧಾನವಾಯಿತು. ರಾಮ ಅಂಗದನನ್ನು ಕರೆದು ರಾವಣನಲ್ಲಿಗೆ ಸಂದೇಶವನ್ನು ಕಳಿಸಿದ. "ಅಂಗದ ಇದನ್ನು ರಾವಣನಿಗೆ ತಲುಪಿಸಿ, ಹೀಗೆಂದು ಹೇಳು, 'ರಾವಣ ನೀನು ಬಹಳ ದೊಡ್ಡ ತಪ್ಪು ಮಾಡಿ ವಿನಾಶವನ್ನು ತಂದುಕೊಳ್ಳುತ್ತಿರುವಿ. ರಾಮ ಕೋಟೆ ಬಾಗಿಲಲ್ಲಿ ಯುದ್ಧದ ನಿರೀಕ್ಷೆಯಲ್ಲಿ

ಕಾದಿರುವನು. ಈಗಲೂ ನಿನಗೆ ಪ್ರಾಣದ ಮೇಲೆ ಆಸೆಯಿದ್ದರೆ ಲಂಕೆ ಉಳಿಯಬೇಕೆಂದಿದ್ದರೆ ನನಗೆ ಶರಣಾಗತನಾಗು. ಇಲ್ಲವಾದಲ್ಲಿ ನೀನು ಸಾಯುವುದು ಖಂಡಿತವಾಗಿರುವುದರಿಂದ ಎಲ್ಲರಿಂದ ಬೀಳ್ಕೊಳ್ಳು, ಯುದ್ಧಕ್ಕಾಗಿ ಕಾಯುತ್ತಿರುತ್ತೇನೆ" ಎಂದು ಹೇಳಿದರನೆಂದು ತಿಳಿಸು. ಹೋಗು ಅಂಗದ. ಸುರಕ್ಷಿತವಾಗಿ ಹಿಂತಿರುಗಿ ಬಾ" ಎಂದು ಹೇಳಿ ಕಳಿಸಿದ.

ರಾಮನ ಆದೇಶದಂತೆ ಅವನ ಸಂದೇಶವನ್ನು ಮತ್ತು ಅವನು ಕಲಿಸಿ ಕಳಿಸಿದ ಮಾತುಗಳನ್ನು ರಾವಣನಿಗೆ ಮುಟ್ಟಿಸಿದ. "ರಾವಣ ನಾನು ಅಂಗದ, ವಾಲಿಯ ಮಗ. ರಾಮನ ದೂತ. ನಿನ್ನ ಪಾಪಗಳಿಂದ ಮುಕ್ತನಾಗುವ ಸಮಯ ಬಂದಿದೆ. ರಾಮನ ಸಂದೇಶ ನಿನ್ನ ಕೈಲಿದೆ. ನಿನ್ನ ನಿರ್ಧಾರ ಏನೆಂದು ತಿಳಿಸು" ಎಂದು ಕೇಳಿದ.

ಅಂಗದನ ಮಾತುಗಳಿಂದ ರಾವಣನಿಗೆ ಇನ್ನಷ್ಟು ಕೋಪ ಬಂತು. ತನ್ನೆದುರಿಗೆ ನಿಂತು ತನಗೇ ಉಪದೇಶ ಮಾಡುವ ಅಂಗದನ ಸೊಕ್ಕನ್ನು ಇಳಿಸಬೇಕೆಂದು ಸೇವಕರನ್ನು ಕರೆದು, "ಇವನನ್ನು ಹಿಡಿದು ಕೊಲ್ಲಿರಿ" ಎಂದು ಆದೇಶಿಸಿದ. ಆದರೆ ಅಂಗದ ತನ್ನ ರೆಟ್ಟೆ ಹಿಡಿದುಕೊಂಡಿದ್ದ ರಾಕ್ಷಸರನ್ನೂ ಎಳೆದುಕೊಂಡು ಆಕಾಶಕ್ಕೆ ಹಾರಿದ. ರಾವಣನ ಅರಮನೆಯ ಗೋಪುರವನ್ನು ಕಾಲಿನಿಂದ ಒದ್ದು ಮುರಿದು ಹಾಕಿದ. ರಾಕ್ಷಸರನ್ನು ಕೆಳಗೆ ಎಸೆದು, ರಾಮನಲ್ಲಿಗೆ ಹಿಂತಿರುಗಿದ.

ಗುಪ್ತಚರರು ರಾಮನಿದ್ದಲ್ಲಿಗೆ ಹೋಗಿ, ಅವರ ಕೈಗೆ ಸಿಕ್ಕಿಯೂ ರಾಮನ ಔದಾರ್ಯದಿಂದ ಪಾರಾಗಿ ಬಂದು ರಾವಣನಿಗೆ ಎಲ್ಲ ವಿಚಾರವನ್ನು ತಿಳಿಸಿದರು. ರಾಮನ ಸಾಹಸವನ್ನು ವಿವರಿಸಿ, ಈಗಲೂ ವಿಚಾರ ಮಾಡಿ ಸೀತೆಯನ್ನು ಬಿಟ್ಟು ಬಿಟ್ಟಲ್ಲಿ ರಕ್ತಪಾತ ತಪ್ಪುತ್ತದೆ ಎಂದು ನಿವೇದಿಸಿದರು.

ರಾವಣ ಅವರ ಮಾತಿಗೆ ಒಪ್ಪಲಿಲ್ಲ. ಸೀತೆಯನ್ನು ಬಿಟ್ಟುಬಿಡುವ ಮಾತನ್ನು ಎತ್ತಬೇಡಿರೆಂದು ಎಚ್ಚರಿಸಿದ.

ವಾನರ ಸೈನ್ಯದ ಬಲಾಬಲ ಪರೀಕ್ಷಿಸಲು ರಾಕ್ಷಸರು ವಾನರ ರೂಪದಲ್ಲಿ ಪ್ರವೇಶಿಸಿದರು. ಆದರೆ ವಿಭೀಷಣ ಅವರನ್ನು ಪತ್ತೆ ಹಚ್ಚಿ ಹಿಡಿದುಕೊಟ್ಟ.

ರಾಮ ಅವರನ್ನು ಕರೆದು ರಾವಣನಿಗೆ ಎಚ್ಚರಿಕೆಯ ಮಾತುಗಳನ್ನು ತಿಳಿಸುವಂತೆ ಹೇಳಿ ಬಿಟ್ಟು ಬಿಟ್ಟ.

ಅವರು ರಾವಣನಲ್ಲಿಗೆ ಬಂದು ಎಲ್ಲವನ್ನೂ ವಿವರಿಸಿದರು. ಅವರ ಕಡೆಯ ಸೈನ್ಯ, ಸೈನ್ಯಾಧಿಪತಿಗಳ ಬಗ್ಗೆ ಮೆಚ್ಚುಗೆ ಸೂಚಿಸಿ, ಅಂಥವರ ಜೊತೆ ಹೋರಾಟ, ಗೆಲುವು ಅಸಾಧ್ಯವೆಂದರು. ಆದರೂ ರಾವಣ ಯುದ್ಧದ ವಿಚಾರ ಬಿಡಲಿಲ್ಲ.

ಯುದ್ಧ ಅನಿವಾರ್ಯವಾಯಿತು. ವಾನರ ಸೈನ್ಯ ಲಂಕೆಯನ್ನು ಪ್ರವೇಶಿಸಿತು.

ಸೀತೆಯ ಮೈಗಾವಲಿನಲ್ಲಿದ್ದ ಸುರಮೆ, ಹತಾಶಳಾಗಿ ಸಾಯಬೇಕೆಂದು ನಿರ್ಧಾರಕ್ಕೆ ಬರುತ್ತಿದ್ದ ಸೀತೆಯನ್ನು ಕಂಡು, ರಾಮ, ಲಕ್ಷ್ಮಣ, ವಾನರ ಸೈನ್ಯ ಲಂಕಾ ಪ್ರವೇಶ ಮಾಡಿರುವ ಸುದ್ದಿ ಹೇಳಿದಳು. ಸೀತೆಗೆ ಸಂತಸವಾಯಿತು. ಅಷ್ಟರಲ್ಲಿ ಯುದ್ಧಾರಂಭದ ಸೂಚನೆಗಳು ಕಾಣಿಸಿದವು. ರಣಭೇರಿಯ ಸದ್ದು ಸೀತೆಯ ಕಿವಿಗೆ ಬಿದ್ದದ್ದೇ ಮತ್ತಷ್ಟು ಗೆಲುವಿನಿಂದ ಹಿಗ್ಗಿದಳು. ತನ್ನ ಬಿಡುಗಡೆ ಹತ್ತಿರದಲ್ಲಿದೆ ಎಂದು ನಂಬಿದಳು.

ವಾನರ ಸೈನ್ಯ ಜಯಘೋಷಗಳನ್ನು ಕೂಗುತ್ತ ರಾಕ್ಷಸರ ಮೇಲೆ ಆಕ್ರಮಣ ಮಾಡಿದರು. ಎರಡೂ ಸೈನ್ಯಗಳ ನಡುವೆ ಭಯಂಕರ ಯುದ್ಧವಾಯಿತು. ಎಷ್ಟೋ ಮಂದಿ ರಾಕ್ಷಸರು ಸತ್ತು ಬಿದ್ದರು ವಾನರರಂತೂ ತಮ್ಮ ಕೈಗೆ ಸಿಕ್ಕ ಮರ, ಗಿಡಗಳನ್ನು ಬೇರು ಸಹಿತ ಕಿತ್ತು ಅವುಗಳನ್ನೇ ಆಯುಧಗಳಗಿ ಬಳಸಿದರು. ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನು ಎಸೆದು ರಾಕ್ಷಸರ ತಲೆ ಬುರುಡೆಗಳನ್ನು ಜಜ್ಜಿ ಹಾಕಿದರು. ರಾಕ್ಷಸ ಸೈನ್ಯ ಹೆದರಿ ಹಿಮ್ಮೆಟ್ಟಿತು.

ಇಡೀ ದಿನ ಯುದ್ಧ ಮುಂದುವರೆಯಿತು. ರಾವಣ ಹೆಚ್ಚು ಹೆಚ್ಚು ಸೈನ್ಯವನ್ನು ಕಳಿಸುತ್ತಿದ್ದ. ಆದರೂ ವಾನರರ ಮುಂದೆ ರಾಕ್ಷಸರು ಸೋಲುತ್ತಿದ್ದರು.

ಇದಕ್ಕಾಗಿ ರಾವಣ ಒಂದು ಉಪಯ ಯೋಚಿಸಿದ. ಅಂಗದ ಇಂದ್ರಜಿತ್‌ರ ನಡುವೆ ಯುದ್ಧ ನಡೆಯುತ್ತಿರುವಗ ಅಂಗದ ತುಂಬಾ



ಧೈರ್ಯವಾಗಿ ಹೋರಾಡಿದ. ಅನೇಕ ರಾಕ್ಷಸರನ್ನು ಕೊಂದ. ಇಂದ್ರಜಿತ್ ಇದನ್ನು ನೋಡಿ ಮಾಯಾ ಯುದ್ಧ ಮಾಡುತ್ತ ರಾಮ, ಲಕ್ಷ್ಮಣರ ಮೇಲೆ ಆಯುಧಗಳನ್ನೆಸೆಯಲು, ಅವರು ಗಾಯಗೊಂಡು ಮೂರ್ಛಿತರಾಗಿದ್ದರು. ರಾವಣನಿಗೆ ಸುದ್ದಿ ತಿಳಿದು ಬರಲು, ರಾಮ, ಲಕ್ಷ್ಮಣರು ಸತ್ತು ಹೋದರೆಂದು ಪುಕಾರು ಹುಟ್ಟಿಸಿದ. ಅಷ್ಟೇ ಅಲ್ಲ, ಸೀತೆಗೆ ಈ ಸುದ್ದಿಯನ್ನು ತಲುಪಿಸಿದ. ವಿಮಾನದಲ್ಲಿ ಕರೆದೊಯ್ದು ದೂರದಿಂದಲೇ ಅವರು ಬಿದ್ದಿರುವುದನ್ನು ತೋರಿಸಿದ. ಸೀತೆಗೆ ದಿಕ್ಕೇ ತೋಚಲಿಲ್ಲ. ಸಾಯುವುದೊಂದೇ ತನಗೆ ದಾರಿ ಎಂದುಕೊಂಡಳು. ಆದರೆ ಅವಳ ಜೊತೆಗೇ ಹೋಗಿದ್ದ ಮತ್ತು ಸೀತೆಯ ಬಗ್ಗೆ ಪ್ರೀತಿಯಿಂದ, ಸಹಾನುಭೂತಿಯಿಂದ ಇದ್ದ ತ್ರಿಜಟೆ ಎಂಬ ರಾಕ್ಷಸಿ, ಸೂಕ್ಷ್ಮವಾಗಿ ರಾಮ, ಲಕ್ಷ್ಮಣರನ್ನು ಗಮನಿಸಿ, ಅವರಲ್ಲಿ ಚಲನವುಂಟಾದುದನ್ನು ನೋಡಿ, ಸೀತೆಗೂ ತೋರಿಸಿ ಧೈರ್ಯ ತುಂಬಿದಳು.

ಸ್ವಲ್ಪ ಹೊತ್ತಾದ ಮೇಲೆ ರಾಮ ಮೂರ್ಛೆ‌ತಿಳಿದೆದ್ದ. ಲಕ್ಷ್ಮಣ ಇನ್ನೂ ಅದೇ ಸ್ಥಿತಿಯಲ್ಲಿದ್ದ. ರಾಮನಿಗೆ ಚಿಂತೆಯಾಯಿತು. ಆದರೆ ಹನುಮಂತ, ಸುಗ್ರೀವಾದಿಗಳು ಧೈರ್ಯ ಹೇಳಿದರು. ಗರುಡನ ಸಹಾಯದಿಂದ

ನಾಗಾಸ್ತ್ರದ ಪ್ರಭಾವವನ್ನು ಕಡಿಮೆ ಮಾಡಿದರು. ಹನುಮಂತ ತಂದ ಸಂಜೀವಿನಿ ಮೂಲಿಕೆಗಳಿಂದ ಲಕ್ಷ್ಮಣನನ್ನು ಎಚ್ಚರಿಸಿ ಅವನ ಗಾಯಗಳಿಗೆ ಶುಶ್ರೂಷೆ ಮಾಡಲಾಯಿತು. ಹಾಗೆಯೇ ರಾಮನಿಗೂ ಸಂಜೀವಿನಿ ಚಿಕಿತ್ಸೆಯಾಯಿತು. ಇಬ್ಬರೂ ಮೊದಲಿಗಿಂತ ಹೆಚ್ಚು ಬಲಶಾಲಿಗಳಾದರು.

ವಾನರವೀರರಿಗೆ ರಾಮ, ಲಕ್ಷ್ಮಣರು ಚೇತರಿಸಿಕೊಂಡದ್ದು ನೋಡಿ ಸಂತೋಷವಾಯಿತು.

ಇತ್ತ ರಾವಣ, ರಾಮ, ಲಕ್ಷ್ಮಣರ, ವಾನರರ ಸೋಲನ್ನು ಸಂಭ್ರಮದಿಂದ ಆಚರಿಸುತ್ತಿದ್ದ. ಆದರೆ ರಾಮ, ಲಕ್ಷ್ಮಣರು ಚೇತರಿಸಿಕೊಂಡ ಸುದ್ದಿ ಕೇಳಿ ಭೂಮಿಗಿಳಿದು ಹೋದ. ಕೋಪ ನೆತ್ತಿಗೇರಿತು. ಕೂಡಲೇ ವೀರರಲ್ಲಿ ವೀರರಾದ ಯೋಧರು ವಜ್ರದಂಷ್ಟ್ರ ಮತ್ತು ಅಕಂಪನರಿಗೆ ಹೇಳಿ ಕಳಿಸಿದ. ಅವರು ಬರಲು, ರಾಮ, ಲಕ್ಷ್ಮಣರ ವಿಷಯ ತಿಳಿಸಿ, ಆದಷ್ಟು ಬೇಗ ಅವರನ್ನು ಸೋಲಿಸಿ ಬರಬೇಕೆಂದು ಆದೇಶಿಸಿದ.

ಅವರಿಬ್ಬರೂ ರಾಮ, ಲಕ್ಷ್ಮಣರನ್ನು ಎದುರಿಸಲು ಮುಂದಾದರು. ಅವರ ನಡುವೆ ಭಯಂಕರ ಯುದ್ಧವಾಯಿತು. ವಜ್ರದಂಷ್ಟ್ರ ಅಕಂಪನರು ಎಷ್ಟೇ ಪರಾಕ್ರಮದಿಂದ ಹೋರಾಡಿದರೂ ರಾಮ, ಲಕ್ಷ್ಮಣರ ಆಯುಧಗಳ, ಬಾಣಗಳ ಪ್ರಹಾರವನ್ನು ತಡೆದುಕೊಳ್ಳಲಾಗದೆ ಪ್ರಾಣ ಬಿಟ್ಟರು.

ರಾವಣನಿಗೆ ಅವರಿಬ್ಬರ ಸಾವಿನ ಸುದ್ದಿ ಸಿಡಿಲೆರಗಿದಂತೆ ಆಯಿತು. ಉತ್ಸಾಹ, ಶಕ್ತಿಗಳನ್ನು ಕಳೆದುಕೊಂಡ ಹಾಗೆ ಎನಿಸಿತು. ಆದರೂ ಯುದ್ಧ ಮುಂದುವರೆಸದೆ ಬೇರೆ ದಾರಿ ಇಲ್ಲವಾಯಿತು. ರಾಮನಿಗೆ ಶರಣಾಗುವುದು ಅವನಿಗೆ ಸಾಧ್ಯವೇ ಇಲ್ಲ. ಪ್ರಹಸ್ತನೂ ಕಡೆಯದಾಗಿ ಬುದ್ಧಿ ಹೇಳಲು ಪ್ರಯತ್ನಿಸಿ ಸೋತಿದ್ದ.

ವಿಧಿಯಿಲ್ಲದೆ ಪ್ರಹಸ್ತ ಸೈನ್ಯದೊಂದಿಗೆ ಹೊರಟು ಯುದ್ಧ ಮಾಡಿದ. ಆದರೆ ಅವನೂ ಯುದ್ಧದಲ್ಲಿ ಮಡಿದ. ರಾವಣನ ಕಡೆಯಿಂದ ಬಂದ ಒಬ್ಬೊಬ್ಬ ವೀರ ಯೋಧನೂ ರಾಮ, ಲಕ್ಷ್ಮಣರ ಕೈಯ್ಯಲ್ಲಿ ಸಾವನ್ನಪ್ಪುತ್ತಿದ್ದ.

ರಾವಣನಿಗೆ ದಿಕ್ಕೇ ತೋಚದಾಯಿತು. ಹೋದವರೆಲ್ಲಾ ಸಾವಿನ ಮನೆ ಸೇರುತ್ತಿದ್ದರು. ಪ್ರಹಸ್ತನ ಜೊತೆಯಲ್ಲಿಯೇ ರಾವಣನು ಇದ್ದರೂ, ಅವನನ್ನು

ರಕ್ಷಿಸಲಾಗಲಿಲ್ಲ. ರಾಮನನ್ನು ವಾನರರನ್ನು ಮುಗಿಸದೆ ಹಿಂತಿರುಗುವುದಿಲ್ಲವೆಂದು ರಥವೇರಿ ರುದ್ರಾವತಾರನಾಗಿ ಹೊರಟು ವಾನರರನ್ನು ಸದೆ ಬಡಿಯತೊಡಗಿದ.

ವಿಭೀಷಣ ರಾಮನ ಜೊತೆಯಲ್ಲಿದ್ದ ರಾಕ್ಷಸವೀರರನ್ನು ಪರಿಚಯಿಸುತ್ತಾ, ಇಂದ್ರಜಿತನನ್ನು ದಾಟಿ ರಾವಣನಿರುವ ಕಡೆಗೆ ಬಂದರು. ರಾವಣನ ಗಂಭೀರವಾದ ಆಕಾರವನ್ನು ಅವನ ದರ್ಪವನ್ನು ನೋಡಿ ಮೆಚ್ಚಿಕೊಂಡರೂ ತನ್ನ ಕೈಯಲ್ಲಿ ಸಾಯುವನಲ್ಲ ಎಂದು ವ್ಯಥೆಯಾಯಿತು.

ಅಸಂಖ್ಯ ವಾನರರನ್ನು ರಾವಣ ಕೊಂದ. ನೀಲ ಇದನ್ನು ನೋಡಿ. ತೀಕ್ಷ್ಣವಾದ ಮತ್ತು ಬೆಂಕಿಯುಗುಳುವ ಬಾಣಗಳನ್ನು ರಾವಣನ ಮೇಲೆ ಪ್ರಯೋಗ ಮಾಡಿದ. ಸಾಕಷ್ಟು ಹೊತ್ತು ಪರಾಕ್ರಮದಿಂದ ರಾವಣನೊಂದಿಗೆ ಹೋರಾಡಿದ. ನೀಲನು ದಣಿದದ್ದು ಕಾಣಿಸಿ, ಲಕ್ಷ್ಮಣ, ರಾವಣನನ್ನು ಎದುರಿಸಲು ನಿಂತ.

ಸ್ವಲ್ಪ ಹೊತ್ತಿಗೇ ರಾವಣನ ಬಾಣಗಳ ಆಘಾತದಿಂದ ಲಕ್ಷ್ಮಣ ಮೂರ್ಛಿತನಾದ. ಅದೃಷ್ಟವಶಾತ್ ಹನುಮಂತ ಇದನ್ನು ನೋಡಿ ಲಕ್ಷ್ಮಣನನ್ನು ಅಲ್ಲಿಂದ ಎತ್ತಿಕೊಂಡು ಹೋದ.

ರಾಮ ರಾವಣನನ್ನು ಎದುರಿಸಿ ಅವನ ರಥ, ಆಯುಧಗಳನ್ನು ತುಂಡರಿಸಿದ. ಅಸಹಾಯಕನಾಗಿ ನಿಂತ ರಾವಣನನ್ನು ಕುರಿತು ರಾಮ, "ರಾವಣ, ಈ ದಿನ ನೀನು ಯುದ್ಧ ಮಾಡಿದ ರೀತಿ ಅದ್ಭುತವಾಗಿತ್ತು. ಹೋಗು ಇಂದು ವಿಶ್ರಾಂತಿ ತೆಗೆದುಕೋ, ಸಾಕಷ್ಟು ಘಾಸಿಗೊಂಡಿದ್ದೀಯ. ಆಯುಧಗಳಿಲ್ಲದವನ ಜೊತೆ ನಾನು ಯುದ್ಧ ಮಾಡುವುದಿಲ್ಲ" ಎಂದು ಹೇಳಿದ.

ರಾವಣ ನಾಚಿಕೆ, ಅವಮಾನಗಳಿಂದ ಮೆಲ್ಲನೆ ಅಲ್ಲಿಂದ ಜಾರಿದ.



## ಕುಂಭಕರ್ಣನ ಸರದಿ

ಅವಮಾನದಿಂದ ಕುದಿಯುತ್ತ ಅರಮನೆಗೆ ಹಿಂತಿರುಗಿದ ರಾವಣ ಸ್ವಲ್ಪ ಹೊತ್ತಿನ ನಂತರ ಸುಧಾರಿಸಿಕೊಂಡು, ಧೈರ್ಯವನ್ನು ತಂದುಕೊಂಡು ಮುಂದಿನ ಕ್ರಮದ ಬಗ್ಗೆ ಯೋಚಿಸಿದ. ಅವನಿಗೆ ದೀರ್ಘ ನಿದ್ರೆಯಲ್ಲಿರುವ ಕುಂಭಕರ್ಣನೊಬ್ಬನೇ ತನಗೀಗ ಆಧಾರ ಎಂದುಕೊಂಡು, ಸೇವಕರನ್ನು, ಸೈನಿಕರನ್ನು ಕರೆದು ಕುಂಭಕರ್ಣನನ್ನು ನಿದ್ದೆಯಿಂದ ಎಬ್ಬಿಸಲು ಆದೇಶ ನೀಡಿದ.

ಕುಂಭ ಕರ್ಣ ವರ್ಷದಲ್ಲಿ ಆರು ತಿಂಗಳು ನಿದ್ದೆಯಲ್ಲಿ ಮುಳುಗಿದ ನೆಂದರೆ ಅವನನ್ನು ಎಬ್ಬಿಸಲು ಬ್ರಹ್ಮನಿಂದಲೂ ಸಾಧ್ಯವಿರಲಿಲ್ಲ. ಆದರೆ ಅದೃಷ್ಟವಶಾತ್ ಈಗ ಕೆಲ ದಿನಗಳ ಹಿಂದಷ್ಟೇ ನಿದ್ದೆಗೆ ಇಳಿದಿದ್ದ. ಆದ್ದರಿಂದ ಹೇಗಾದರೂ ಮಾಡಿ ಅವನನ್ನು ಎಬ್ಬಿಸಲು ಪ್ರಯತ್ನಗಳು ನಡೆದಿದ್ದವು.

ರಾವಣನ ಅಧಿಕಾರಿಗಳು, ಸೇವಕರು ಕುಂಭಕರ್ಣನ ಅರಮನೆ ತಲುಪಿ ಅವನನ್ನು ಎಬ್ಬಿಸಲು ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡಿದ್ದರು. ಅವನಿಗೊಂದು ಅಭ್ಯಾಸವಿತ್ತು. ನಿದ್ದೆಯಿಂದೆದ್ದು ಕಣ್ಣು ಬಿಟ್ಟು ಕೂಡಲೇ ಹಸಿವನ್ನು ಹಿಂಗಿಸಿಕೊಳ್ಳಬೇಕಿತ್ತು. ಅದಕ್ಕಾಗಿ ಅವನನ್ನು ಎಬ್ಬಿಸುವ ಮೊದಲೇ ಬೆಟ್ಟ ಬೆಟ್ಟಗಳೆತ್ತರದ ರಾಶಿ ರಾಶಿ ಆಹಾರವನ್ನು ತಯಾರಿಸಿ ಸಿದ್ಧವಾಗಿ ಇರಿಸಿದರು. ಭೇರಿ ಡಿಂಡಿಮಗಳ ಅಬ್ಬರದ ಸದ್ದನ್ನು ಮಾಡಿದರು. ಅವನ ದೇಹವನ್ನು ಅಸಂಖ್ಯರು ಸೇರಿ ಅಲುಗಾಡಿಸಿದರು. ಎಷ್ಟೋ ಹೊತ್ತಾದ ಮೇಲೆ ಕುಂಭಕರ್ಣ ಕಣ್ಣು ಬಿಟ್ಟು ಎದ್ದು ಆಕಳಿಸಿದ.

ತನ್ನ ಮುಂದೆ ಇದ್ದ ರಾಶಿ ರಾಶಿ ಆಹಾರವನ್ನು ಮುಗಿಸಿದ. ಸ್ವಲ್ಪ ಶಾಂತನಾಗಿದ್ದಂತೆ ಕಾಣಿಸಿದಾಗ ರಾವಣನ ಮಂತ್ರಿಯಾದ ಯೂಪಾಕ್ಷ

ನೆಂಬ ರಾಕ್ಷಸ ಮೆಲ್ಲಗೆ ಬಳಿಗೆ ಹೋಗಿ ಯುದ್ಧದಲ್ಲಿ ತಮಗಾದ ಸೋಲನ್ನು ವಿವರಿಸಿದ. ಲಂಕೆಯನ್ನು ವಾನರ ಸೇನೆ ಸುತ್ತುವರೆದಿರುವ ವಿಚಾರ ತಿಳಿಸಿದ.

ಇದೆಲ್ಲವನ್ನೂ ಕೇಳಿದ ಕುಂಭಕರ್ಣ ಕೂಡಲೇ ಹೋಗಿ ಅವರೆಲ್ಲರನ್ನೂ ಮುಗಿಸಿ ಬರುತ್ತೇನೆಂದು ಹೊರಟು ನಿಂತ. ಆದರೆ ಯೂಪಾಕ್ಷ, ಮೊದಲು ರಾವಣನನ್ನು ಕಂಡು ಅವನ ಸಲಹೆ ತೆಗೆದುಕೊಳ್ಳಲು ಸೂಚಿಸಿದ.

ಕುಂಭಕರ್ಣ ರಾವಣನ ಬಳಿಗೆ ಬಂದು, "ಹೇಳಣ್ಣ, ನನಗೇನು ಕೆಲಸ ಮಾಡಬೇಕಿದೆ? ಇಷ್ಟು ಆತುರವಾಗಿ ನನ್ನನ್ನೇಕೆ ನಿದ್ದೆಯಿಂದ ಎಬ್ಬಿಸಿದೆ? ಹೇಳು ಯಾರನ್ನು ಕೊಂದು ಬರಬೇಕಿದೆ?" ಎಂದು ವಿನಯದಿಂದ ಕೇಳಿದ.

ರಾವಣ, ಮೊದಲಿನಿಂದ ಇಲ್ಲಿಯವರೆಗೆ ನಡೆದುದೆಲ್ಲವನ್ನೂ ವಿವರಿಸಿದ. ರಾಮ, ಲಕ್ಷ್ಮಣರು ನಿಜವಾಗಿಯೂ ತನಗೆ ತಲೆನೋವಾಗಿದ್ದರೆಂದು ತಿಳಿಸಿದ. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಅವರನ್ನು ಮುಗಿಸಿ ಬಾ ಎಂದು ಹೇಳಿದ.

ಅಣ್ಣನ ಆತುರ, ಭಯ, ಆತಂಕಗಳನ್ನು ಕಂಡು ಮೊದಲಿಗೆ ಕೋಪ ಬಂದರೂ ನಂತರ ನಡೆದದ್ದೆಲ್ಲಾ ಮತ್ತೆ ನೆನೆದಾಗ ಅಣ್ಣನ ಬಗ್ಗೆ ಕೋಪ ಮತ್ತು ಮರುಕ ಉಂಟಾಯಿತು.

"ಅಣ್ಣ ನಾನೊಂದೆರಡು ಮಾತು ಹೇಳಿದರೆ ನೀನು ಕೋಪಿಸಿ ಕೊಳ್ಳುವುದಿಲ್ಲ ತಾನೇ! ಈ ಮೊದಲೇ ನಿನಗೆ ನಾವು ಬುದ್ಧಿವಾದ ಹೇಳಿದ್ದೆವು. ವಿನಾಕಾರಣ ಅನ್ಯ ಸ್ತ್ರೀಯನ್ನು ಹೀಗೆ ಕದ್ದು ತರುವುದು ನಿನ್ನಂತಹ ವೀರನಿಗೆ, ಜ್ಞಾನಿಗೆ, ಚಕ್ರವರ್ತಿಗೆ ಉಚಿತವಲ್ಲ. ಇದರ ಪರಿಣಾಮಗಳು ಭಯಂಕರವಾಗಿರುತ್ತವೆ ಎಂದೆಲ್ಲ ಹಿರಿಯರೂ, ಬುದ್ಧಿವಂತರೂ ಆದ ಮಂತ್ರಿಗಳು ವಿಭೀಷಣ ಎಲ್ಲರೂ ಹೇಳಿದರೂ ನೀನು ಯಾವುದನ್ನೂ ಮನಸ್ಸಿಗೆ ತೆಗೆದುಕೊಳ್ಳಲಿಲ್ಲ. ಅವರೆಲ್ಲರ ಹಿತಬೋಧೆ ನಿನಗೆ ಇಷ್ಟವಾಗಲಿಲ್ಲ. ಅದರ ಪರಿಣಾಮ ಈಗ ನಿನ್ನ ಮುಂದಿದೆ' ಎಂದು ಹೇಳಿ ಕುಂಭಕರ್ಣ ಮೌನ ತಾಳಿದ.

ಕುಂಭಕರ್ಣನ ಉಪದೇಶ ಅವನಿಗೆ ಈಗ ಬೇಕಿರಲಿಲ್ಲ. ಅದಕ್ಕೆಂದೆ, "ತಮ್ಮ ಆದದ್ದನ್ನು ಕಥೆಯಾಗಿ ಹೇಳುತ್ತಾ ಕೇಳುತ್ತಾ ಕುಳಿತುಕೊಳ್ಳಲು ಇದು ಸಮಯವಲ್ಲ. ಈಗ ನನಗೆ ಬೇಕಾಗಿರುವುದು ನಿನ್ನ ಸಹಾಯ. ನಿನಗೆ ಆಗುವುದೋ ಇಲ್ಲವೋ ಅಷ್ಟನ್ನು ಮಾತ್ರ ಹೇಳು" ಎಂದು ಸ್ವಲ್ಪ ಅಸಮಾಧಾನದಿಂದಲೇ ಮಾತನಾಡಿದ.

ಕುಂಭಕರ್ಣನಿಗೆ ರಾವಣನ ಪರಿಸ್ಥಿತಿ, ಅವನ ಅಸಮಾಧಾನಗಳು ಅರ್ಥವಾದವು. ಎಷ್ಟೇ ಆದರೂ ಅವನು ತನ್ನ ಅಣ್ಣ. ಕಷ್ಟದಲ್ಲಿದ್ದಾನೆ, ಸಹಾಯ ಮಾಡುವುದೊಂದೇ ಮಾರ್ಗ ಎಂದುಕೊಂಡು, "ಹೇಳಣ್ಣ, ಈಗ ನಾನು ಮಾಡಬೇಕಾದ್ದೇನು?" ಎಂದು ಪ್ರಶ್ನಿಸಿದ.

"ನನಗೆ ಬೇಕಾದ್ದು ವಾನರರ ಸೋಲು. ರಾಮ, ಲಕ್ಷ್ಮಣರ ಸಾವು" ಎಂದು ರಾವಣನು ಹೇಳಲು, ಕುಂಭಕರ್ಣ "ಅಣ್ಣ ನೀನು ನಿಶ್ಚಿಂತೆಯಿಂದಿರು. ನೋಡುತ್ತಿರು ನಾಳೆ ವಾನರರರ ರಕ್ತ ಪ್ರವಾಹ ಹರಿಯುವುದು. ಇನ್ನು ರಾಮ ನಿನ್ನ ಬಳಿಗೆ ಬರುವುದು ಸಾಧ್ಯವೇ ಇಲ್ಲ. ನಾನು ಬದುಕಿರುವವರೆಗೆ ನಿನ್ನನ್ನು ತಲುಪುವುದಿಲ್ಲ. ನಾನು ಸೋಲುವುದೂ ಇಲ್ಲ" ಎಂದೆಲ್ಲಾ ಹೇಳಿ ಸಮಾಧಾನಪಡಿಸಿ, ನಾಳಿನ ಯುದ್ಧಕ್ಕೆ ಸಿದ್ಧತೆಗಳನ್ನು ಮಾಡಿಕೊಳ್ಳಲು ಹೊರಟ.

ರಾವಣನ ಸಂತೋಷಕ್ಕೆ ಕೊನೆಯಿಲ್ಲವಾಯಿತು. ಇನ್ನೇನು ಕುಂಭಕರ್ಣನು ಅವರನ್ನು ಕೊಂದೇ ಬಿಟ್ಟನು. ತಾನು ಗೆದ್ದೇ ಬಿಟ್ಟೆ ಎಂದು ಭ್ರಮೆಯಲ್ಲಿದ್ದ.

ಕುಂಭಕರ್ಣ ಯುದ್ಧ ಸನ್ನದ್ಧನಾಗಿ, ಅಣ್ಣನಿಂದ ಆಶೀರ್ವಾದ ಪಡೆದು ರಣಭೂಮಿಗೆ ಹೊರಟ.

ದೈತ್ಯಾಕಾರದ ಕುಂಭಕರ್ಣನಿಗೆ ನಳ, ನೀಲ, ಅಂಗದ ಹನುಮಾದಿಗಳು ಎದುರಾದರು. ಭಯಂಕರ ಯುದ್ಧ ನಡೆಯಿತು. ಈ ಮಧ್ಯೆ ಗಾಯಗೊಂಡಿದ್ದ ಸುಗ್ರೀವನನ್ನು ಹೊತ್ತುಕೊಂಡು ಕುಂಭಕರ್ಣ ಲಂಕೆಯ ಕಡೆಗೆ ಓಡಿದ. ವಾನರರೆಲ್ಲರಿಗೆ, ತಮ್ಮ ರಾಜನಿಗೆ ಏನಾಗುವುದೋ ಎಂದು ಭಯವಾಯಿತು. ಆದರೆ ಹನುಮಂತನಿಗೆ, ಸುಗ್ರೀವ ಖಂಡಿತವಾಗಿ ಸುರಕ್ಷಿತವಾಗಿ ಬರುತ್ತಾನೆ ಎನಿಸಿತ್ತು.

ಕುಂಭಕರ್ಣ ಮರಳಿ ಬಂದು ಮತ್ತೆ ಯುದ್ಧಕ್ಕೆ ಸಿದ್ಧನಾದ. ವಾನರ ವೀರರನ್ನು ಕೊಚ್ಚಿ ಹಾಕಿದ. ಇದನ್ನು ನೋಡಿ ಲಕ್ಷ್ಮಣ ತನ್ನ ಅಮೂಲ್ಯವಾದ ಬಾಣಗಳಿಂದ ಕುಂಭಕರ್ಣನನ್ನು ಹೊಡೆದ. ಆದರೂ ಕುಂಭಕರ್ಣ ವಾನರರ ಕೊಲೆ ಮಾಡುತ್ತಲೇ ಮುಂದೆ ಹೋದ.

ಕಡೆಗೆ ರಾಮನೇ ಆ ರಾಕ್ಷಸನೆಡೆಗೆ ಬಂದು, ತೀಕ್ಷ್ಣ ಬಾಣಗಳಿಂದ ಅವನ ಕಾಲುಗಳನ್ನು ಕತ್ತರಿಸಿದರೂ ಅವನು ತೆವಳುತ್ತಲೇ ಯುದ್ಧ ಮಾಡಿದ. ವಿಧಿಯಿಲ್ಲದೆ ರಾಮ ಈಗ ಕುಂಭಕರ್ಣನ ತಲೆಗೆ ಗುರಿಯಿಟ್ಟು ಹೊಡೆದು ತಲೆ ಹಾರಿಸಿದ.

ಕೂಡಲೇ ಅವನ ಸಾವಿನ ಭಯಂಕರ ಸುದ್ದಿ ರಾವಣನನ್ನು ತಲುಪಿತು. ದುಃಖಾವೇಶಗಳಿಂದ ರಾವಣ ಕುಸಿದು ಹೋದ. ಅವನ ಕಡೆಯ ಆಸೆಯೂ ಮುಗಿದು ಹೋಯಿತು. ಅವನ ಸಾವಿಗಾಗಿ ಹಲುಬಿದ. ಆರ್ತವಾಗಿ ದುಃಖಿಸಿದ. ತನ್ನ ತಮ್ಮನ ಸಾವಿಗೆ ಕಾರಣನಾದವನನ್ನು ಕೊಲ್ಲದೆ ಬಿಡುವುದಿಲ್ಲ ಎಂದು ಧೀರ ಪ್ರತಿಜ್ಞೆ ಮಾಡಿದ.

ಇಂದ್ರಜಿತು ತಂದೆಯ ಸ್ಥಿತಿಯನ್ನು ನೋಡಿ ದುಃಖಿಸಿದ, ಸಮಾಧಾನ ಹೇಳಿದ. ತಾನಿನ್ನೂ ಬದುಕಿರುವಾಗ ಇಷ್ಟೊಂದು ನಿರಾಶೆ ಬೇಡವೆಂದು ತಿಳಿಸಿ, ವಾನರರೊಂದಿಗೆ ಈ ಬಾರಿ ಮತ್ತೆ ತಾನೇ ಯುದ್ಧಕ್ಕೆ ಇಳಿದ.

ಇಂದ್ರಜಿತುವಿನ ದಾಳಿಯನ್ನು ಎದುರಿಸಲಾರದೆ ವಾನರ ಸೇನೆ ದಿಕ್ಕಾಪಾಲಾಗಿ ಓಡಿತು. ವಿಭೀಷಣ ಎಲ್ಲರನ್ನೂ ಹಿಂದಕ್ಕೆ ಕರೆದು ಧೈರ್ಯ ತುಂಬಿದ ಜಾಂಬವಂತನೂ ಗಾಯಗೊಂಡಿದ್ದ. ಅವನಿಗೆ ಹನುಮಂತನ ಚಿಂತೆಯಾಯಿತು. ವಿಚಾರಿಸಿದ. ರಾಮ, ಲಕ್ಷ್ಮಣರು ಮೊದಲುಗೊಂಡು ಎಲ್ಲರೂ ಮೂರ್ಛೆಗೊಂಡಿದ್ದರು. ಜಾಂಬವಂತ ಹನುಮಂತನನ್ನು ಕರೆಸಿ, ಹಿಮಾಲಯದಲ್ಲಿ ಮೂಲಿಕೆಗಳಿರುವ ಜಾಗವನ್ನು ತಿಳಿಸಿ, ಅದಷ್ಟು ಬೇಗ ಅವುಗಳನ್ನು ತರುವಂತೆ ಹೇಳಿದ.

ಹನುಮಂತ, ಜಾಂಬವಂತ ಹೇಳಿದ ಮೂಲಿಕೆಗಳನ್ನು ತಂದು ಎಲ್ಲರನ್ನೂ ಎಚ್ಚರಗೊಳಿಸಿದ. ಮೂರ್ಛೆಯಿಂದ ಎದ್ದ ರಾಮ, ಲಕ್ಷ್ಮಣರು ರಾವಣ, ಇಂದ್ರಜಿತರ ಮೇಲೆ ಬಾಣ ಪ್ರಯೋಗ ಮಾಡಿದರು. ಲಕ್ಷ್ಮಣ

ತನ್ನಲ್ಲಿದ್ದ ಅಮೂಲ್ಯವಾದ ಇಂದ್ರಾಸ್ತ್ರವನ್ನು, ರಾಮನನ್ನು ಧ್ಯಾನಿಸಿ ಇಂದ್ರಜಿತನ ಮೇಲೆ ಬಿಟ್ಟು ಅವನನ್ನು ಸಾಯಿಸಿದ. ಇಂದ್ರಜಿತನ ಸಾವಿನೊಂದಿಗೆ ರಾಕ್ಷಸವಂಶವೇ ಕೊನೆಯಾಯಿತೆಂದು ಸಂತೋಷಿಸಿದರು.

ಮೊದಲಿಗೆ ರಾವಣ ಇಂದ್ರಜಿತನ ಸಾವನ್ನು ನಂಬಲಿಲ್ಲ. ಆದರೆ ಮಗನ ಸಾವನ್ನು ಒಪ್ಪಿಕೊಳ್ಳುವುದು ಕಷ್ಟವೇ ಆದರೂ ಸತ್ಯವನ್ನು ನಂಬಲೇ ಬೇಕಾಯಿತು. ಅವನಲ್ಲಿ ಯುದ್ಧಕ್ಕೆ ಕಳಿಸಲು ಬೇರೆ ಯಾರೂ ಇರಲಿಲ್ಲ. ಕಡೆಯದಾಗಿ ತಾನೇ ಹೋಗುವುದೆಂದು ನಿರ್ಧರಿಸಿದ.



## ರಾವಣನ ಸಾವು - ರಾಮನ ಗೆಲುವು

ರಾವಣ ಯುದ್ಧ ಭೂಮಿಯ ಕಡೆಗೆ ಹೊರಟ. ಹೊರಡುತ್ತಿದ್ದಂತೆ ಏನೇನೋ ಅಪಶಕುನಗಳಾದವು. ಮಂಡೋದರಿ ರಾವಣ ಯುದ್ಧಕ್ಕೆ ಹೋಗುವುದನ್ನು ತಡೆಯಲು ಪ್ರಯತ್ನಿಸಿದಳು. ಆದರೆ ರಾವಣ ಯಾರ ಮಾತನ್ನೂ ಕೇಳದೆ ಹೊರಟಿದ್ದ.

ಮೊದಲಿಗೆ ರಾವಣನಿಗೆ ಲಕ್ಷ್ಮಣ ಎದುರಾದ. ಕ್ರೂರವಾದ ತೀಕ್ಷ್ಣವಾದ ಬಾಣ ಪ್ರಯೋಗಗಳಾದವು. ಯಾರೊಬ್ಬರೂ ಸೋಲುವಂತೆ ಕಾಣಲಿಲ್ಲ. ರಾವಣನಿಗೆ ಲಕ್ಷ್ಮಣನಿಗಿಂತ ರಾಮನನ್ನು ಎದುರಿಸುವುದು ಮುಖ್ಯವಾಗಿತ್ತು. ಲಕ್ಷ್ಮಣನನ್ನು ದಾಟಿ ರಾಮನ ಕಡೆಗೆ ಹೋಗಬೇಕೆಂದು ಪ್ರಯತ್ನಿಸಿದರೂ ಲಕ್ಷ್ಮಣನಿಂದಾಗಿ ಅದು ಸಾಧ್ಯವಾಗಲಿಲ್ಲ. ಆದರೂ ಬಿಡದೆ ಹಟದಿಂದ ರಾಮನೆಡೆಗೆ ನುಗ್ಗಿದ. ಮಹಾಬಲಶಾಲಿಗಳಾದ ರಾಮ, ರಾವಣ ನಡುವಿನ ಯುದ್ಧ ನೋಡುವವರಿಗೆ ರೋಮಾಂಚನಕಾರಿಯಾಗಿತ್ತು.

ರಾಮ ತೀಕ್ಷ್ಣ ಬಾಣಗಳಿಂದ ರಾವಣನ ಕಾಲುಗಳೆಡೆಗೆ ಗುರಿಯಿಟ್ಟು ಹೊಡೆದ. ಆದರೂ ರಾವಣ ಬೀಳಲಿಲ್ಲ. ನಂತರ ಲಕ್ಷ್ಮಣ, ವಿಭೀಷಣರು ಒಟ್ಟಿಗೆ ರಾವಣನ ಮೇಲೆ ಬಿದ್ದರು. ಲಕ್ಷ್ಮಣನಿಗೆ ಗುರಿಯಿಟ್ಟು ಒಂದು ಭಯಂಕರ ಅಸ್ತ್ರವನ್ನು ಪ್ರಯೋಗಿಸಿದ. ಅದರ ಹೊಡೆತಕ್ಕೆ ಲಕ್ಷ್ಮಣ ಆಯತಪ್ಪಿ ಕೆಳಗೆ ಬಿದ್ದ. ಇನ್ನೊಂದು ಬಾಣ ಹೊಡೆದರೆ ಲಕ್ಷ್ಮಣ ಸಾಯುತ್ತಿದ್ದ. ಅಷ್ಟರಲ್ಲಿ ರಾಮ ಅಲ್ಲಿಗೆ ಓಡಿ ಬಂದ.

ದಿವ್ಯಾಸ್ತ್ರಗಳಿಂದ ರಾಮ ರಾವಣನನ್ನು ನಿರಸ್ತ್ರನನ್ನಾಗಿ ಮಾಡಿದ. ರಾವಣನ ಮೈಯೆಲ್ಲಾ ಬಾಣಗಳಿಂದ ತುಂಬಿ ಹೋಯಿತು. ಇನ್ನು ಅವನಿಗೆ ಪ್ರತಿರೋಧಿಸಲು ಆಗಲಿಲ್ಲ. ಪ್ರಜ್ಞೆ ತಪ್ಪಿ ಕೆಳಗೆ ಬಿದ್ದ. ರಾವಣನ ಸಾರಥಿ ಅವನನ್ನು ಅಲ್ಲಿಂದ ತಪ್ಪಿಸಿ ಕರೆದುಕೊಂಡು ಹೋದ. ಆದರೆ



ದಾರಿಯಲ್ಲೇ ಎಚ್ಚರಗೊಂಡ ರಾವಣ ಮತ್ತೆ ಹಿಂದಕ್ಕೆ ಬಂದು ರಾಮನನ್ನು ಎದುರಿಸಲು ನಿಂತ. ಸುಮಾರು ಹೊತ್ತು ಅವರಿಬ್ಬರ ನಡುವೆ ಯುದ್ಧ ನಡೆಯಿತು. ರಾವಣನ ಪರಾಕ್ರಮ, ಯುದ್ಧ ಕೌಶಲವನ್ನು ಕಂಡು ರಾಮ ಮೆಚ್ಚಿಕೊಂಡ. ರಾವಣನ ದಶತಲೆಗಳು ಶ್ರೀರಾಮನ ಬಾಣಗಳಿಂದ ಉರುಳುತ್ತಿದ್ದವು. ಆದರೆ, ಮತ್ತೆ ಹುಟ್ಟುತ್ತಿದ್ದವು. ರಾಮ ಚಿಂತೆಗೊಳಗಾದ. ಆದರೂ ಅವನನ್ನು ಕೊಲ್ಲದೆ ವಿಧಿಯಿಲ್ಲ. ಆಗ ವಿಭೀಷಣ ರಾವಣನ ಎದೆಯಲ್ಲಿರುವ ಅಮೃತಕಲಶದ ವಿಷಯವನ್ನು ತಿಳಿಸಿದನು. ತಾನಾಗಿ ತನ್ನ ನಡತೆಯಿಂದಲೇ ಸಾವನ್ನು ಬರಮಾಡಿಕೊಂಡನಲ್ಲ ಎಂದು ಚಿಂತಿಸಿ ಬ್ರಹ್ಮಾಸ್ತ್ರವನ್ನು ಕಡೆಯದಾಗಿ ಪ್ರಯೋಗಿಸಿದ. ನೇರವಾಗಿ ಆ ಬಾಣ ರಾವಣದ ಎದೆಯಲ್ಲಿ ನಾಟಿತು ಅಷ್ಟೇ!! ಕ್ಷಣಾರ್ಧದಲ್ಲಿ ರಾವಣ ಸಾವನ್ನಪ್ಪಿದ.

ವಿಭೀಷಣ ಅಣ್ಣನ ಸಾವಿಗಾಗಿ ಅತಿಯಾಗಿ ದುಃಖಿಸಿದ. ಅವನಿಂದ ಬೇರೆಯಾಗಿ ಬಂದಿದ್ದರೂ, ಅವನೆಷ್ಟೇ ಉದ್ಧಟನಾದರೂ ವಿಭೀಷಣನಿಗೆ ಅಣ್ಣನ ಬಗ್ಗೆ ಕನಿಕರವೆನಿಸಿತು. ಗಂಟಲು ತುಂಬಿ ಬಂತು.

ರಾಮ ವಿಭೀಷಣನನ್ನು ಸಮಾಧಾನಪಡಿಸಿ ರಾವಣನ ಅಂತ್ಯಕ್ರಿಯೆಗಳನ್ನು ಪೂರೈಸಲು ತಿಳಿಸಿದ. ರಾವಣನ ಶೌರ್ಯ, ಸಾಹಸಗಳನ್ನು ಮತ್ತೊಮ್ಮೆ ಕೊಂಡಾಡಿದ.

"ವಿಭೀಷಣ, ದುಃಖಿಸುವುದನ್ನು ನಿಲ್ಲಿಸಿ ಮುಂದಿನ ಕಾರ್ಯಗಳ ಕಡೆ ಗಮನ ಕೊಡು. ರಾವಣ ನಿನಗೆ ಸೋದರನಾದರೆ ನನಗೂ ಸೋದರನೆ. ಸಾವಿನ ನಂತರ ಶತ್ರುತ್ವ ಕೂಡದು. ನಾನೂ ಕೂಡ ನಿನ್ನ ಜೊತೆ ಅಂತ್ಯ ಸಂಸ್ಕಾರದಲಿ ಭಾಗವಹಿಸುತ್ತೇನೆ" ಎಂದು ತನ್ನ ಔದಾರ್ಯವನ್ನು ತೋರಿಸುತ್ತಾ ಹೇಳಿದ.

ಇಂದ್ರಾದಿ ದೇವತೆಗಳು ಪ್ರತ್ಯಕ್ಷರಾಗಿ ರಾಮನನ್ನು ಅವನ ದಿಗ್ವಿಜಯಕ್ಕಾಗಿ ಅಭಿನಂದಿಸಿದರು. ರಾವಣನೇ ಸ್ವತಃ ತನ್ನ ವಿನಾಶವನ್ನು ತಂದುಕೊಂಡ. ಆದರೆ ವಿಷ್ಣುವಿನ ಅವತಾರನಾದ ರಾಮನಿಂದ ಸಾವನ್ನಪ್ಪಿ ಪುಣ್ಯಲೋಕಕ್ಕೆ ಹೋಗಲು ಅರ್ಹನಾದ.

ಅಂತಃಪುರದ ಸ್ತ್ರೀಯರೆಲ್ಲರೂ ರಾವಣನ ಸಾವಿಗಾಗಿ ಶೋಕಿಸಿದರು. ಮಂಡೋದರಿಯ ದುಃಖ ಮುಗಿಲು ಮುಟ್ಟಿತು. ರಾವಣನ ಮೃತದೇಹದ ಮೇಲೆ ದೊಪ್ಪನೆ ಉರುಳಿ ಬಿದ್ದಳು.



## ಅಯೋಧ್ಯೆಯ ಕಡೆಗೆ ಪಯಣ

ವಿಭೀಷಣನನ್ನು ಲಂಕಾ ರಾಜ್ಯದ ರಾಜನನ್ನಾಗಿ ಮಾಡಿ, ರಾಮ ಅವನಿಂದ ಬೀಳ್ಕೊಂಡ. ವಿಭೀಷಣನಿಗೆ ರಾಮನನ್ನು ಅಷ್ಟು ಬೇಗ ಕಳಿಸಿಕೊಡಲು ಮನಸ್ಸಾಗಲಿಲ್ಲ. ಆದರೆ ರಾಮ ಭರತನಿಗೆ ಕೊಟ್ಟಿದ್ದ ಗಡುವು ಮೀರುವುದರಲ್ಲಿ ಇದ್ದುದರಿಂದ ಹೊರಡಲೇಬೇಕೆಂದ. ವಿಭೀಷಣನಿಗೆ ಸೀತೆಯನ್ನು ಕರೆತರಲು ಕೇಳಿಕೊಂಡ. ವಿಭೀಷಣ ಹನುಮಂತನಿಗೆ ಸೀತೆಯ ಬಳಿಗೆ ಹೋಗಿ ನಡೆದುದನ್ನು ವಿವರಿಸಲು ಹೇಳಿದ.

ಹನುಮಂತ ಅಂತೆಯೇ ಶೀಘ್ರವಾಗಿ ಅಶೋಕವನಕ್ಕೆ ಬಂದು ಸೀತೆಯನ್ನು ಕಂಡು ರಾಮನ ಗೆಲುವು ರಾವಣನ ಸಾವು ಮೊದಲಾದ ವಿಷಯಗಳನ್ನು ವಿವರಿಸಿ ತಿಳಿಸಿದ. ಸೀತೆಯ ಸಂತೋಷಕ್ಕೆ ಮಿತಿಯಿಲ್ಲವಾಯಿತು.

ಹನುಮಂತ ಸೀತೆಯನ್ನು "ತಾಯಿ, ಪ್ರಭುವಿಗೆ ಹೇಳಲು ಸಂದೇಶವಿದೆಯೇ?" ಎಂದು ಪ್ರಶ್ನಿಸಿದ.

ಸೀತೆ, "ಮಗು, ಹೇಳು ನನ್ನ ಸ್ವಾಮಿ ರಾಮನಿಗೆ, ಈ ನಿಮ್ಮ ಸೀತೆ ಆದಷ್ಟು ಬೇಗ ನಿಮ್ಮನ್ನು ಕಾಣುವ ಆತುರದಲ್ಲಿದ್ದಾಳೆ ಎಂದು" ಎಂದು ಹೇಳಿದಳು.

ಹನುಮಂತ ವಿಧೇಯನಾಗಿ ಬಂದು ರಾಮನಿಗೆ ಸೀತೆಯ ಸಂದೇಶ ಮುಟ್ಟಿಸಿದ. ಆದರೆ ರಾಮನ ಮುಖದಲ್ಲಿ ಯಾವ ಗೆಲುವೂ ಕಾಣಲಿಲ್ಲ. ದುಗುಡದಿಂದ ಕೂಡಿದಂತಿತ್ತು.

ಸ್ವಲ್ಪ ಹೊತ್ತಿನ ನಂತರ ವಿಭೀಷಣನ ಆದೇಶದಂತೆ ಸೀತೆಯನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ, ರಾಮನ ಸಮಕ್ಷಮಕ್ಕೆ ಕರೆತಂದರು.

ವಾನರರು ಮತ್ತು ಉಳಿದವರು ಪಲ್ಲಕ್ಕಿಯಿಂದ ಇಳಿಯುತ್ತಿದ್ದ ಸೀತೆಯನ್ನು ನೋಡಲು ತಾಮುಂದು ನಾಮುಂದು ಎಂದು ನುಗ್ಗಿದರು.

ಪಲ್ಲಕ್ಕಿ ಇಳಿದ ಸೀತೆ ನೇರವಾಗ ರಾಮನ ಬಳಿಗೆ ಬಂದಳು. ಪ್ರೀತಿಯಿಂದ, "ಆರ್ಯಪುತ್ರ" ಎಂದು ಕರೆದಳು. ಆದರೆ ರಾಮ ಅದರಿಂದ ಸಂತೋಷಪಟ್ಟಂತೆ ಕಾಣಲಿಲ್ಲ. ನಿರ್ಭಾವುಕನಾಗಿ ಹೇಳಿದ, "ಸೀತೆ ನಾನು ಶತ್ರುವನ್ನು ಕೊಂದು ನಿನ್ನನ್ನು ಬಿಡಿಸಿದೆ. ಕ್ಷತ್ರಿಯನಾಗಿ ನನ್ನ ಕರ್ತವ್ಯವನ್ನು ಮಾಡಿದ್ದೇನೆ, ಅಲ್ಲದೆ, ನಿನ್ನ ಮೇಲಿನ ಪ್ರೀತಿಯಿಂದಲ್ಲ. ನೀನು ಸ್ವತಂತ್ರಳು. ನಿನಗೆ ಇಷ್ಟಬಂದಂತೆ ಇರಬಹುದು" ಎಂದು ನಿಷ್ಠುರವಾಗಿ ನುಡಿದ.

ಸೀತೆಗೆ ಈ ಮಾತುಗಳನ್ನು ಕೇಳಿಸಿಕೊಳ್ಳಲು ಆಗಲಿಲ್ಲ. ಬದುಕುವ ಆಸೆಯೂ ಮೂಡಲಿಲ್ಲ. ರಾಮನ ಮಾತಿಗೆ ಪ್ರತಿಯಾಗಿ ಆಡಲಿಲ್ಲ. ಮೌನವಾಗಿದ್ದು ಲಕ್ಷ್ಮಣನಿಗೆ, "ಲಕ್ಷ್ಮಣ, ನಿನ್ನ ಅಣ್ಣನಿಗೆ ಬೇಡವಾದ ನಾನು ಬದುಕಿ ಪ್ರಯೋಜನವಿಲ್ಲ. ದಯವಿಟ್ಟು ಚಿತೆಯೊಂದನ್ನು ಏರ್ಪಡಿಸು. ನಾನು ಅಗ್ನಿ ಪ್ರವೇಶ ಮಾಡಲು ಬಯಸುತ್ತೇನೆ" ಎಂದು ಕೈ ಮುಗಿದು ಪ್ರಾರ್ಥಿಸಿದಳು.

ಅಣ್ಣನ ರೀತಿ ಲಕ್ಷ್ಮಣನಿಗೆ ಅರ್ಥವಾಗಲಿಲ್ಲ. ಒಲ್ಲದ ಮನಸ್ಸಿನಿಂದ ಸೀತೆಯ ಆಜ್ಞೆಯನ್ನು ಪಾಲಿಸಿದ. ಅಗ್ನಿಕುಂಡವೊಂದು ಸಿದ್ಧವಾಯಿತು. ಸೀತೆ ಅಗ್ನಿಗೆ ಪ್ರದಕ್ಷಿಣೆ ಹಾಕಿ ದೇವತೆಗಳನ್ನು ಪ್ರಾರ್ಥಿಸಿದಳು. ತಾನು ಪರಿಶುದ್ಧಳಾಗಿದ್ದಲ್ಲಿ ಅಗ್ನಿ ದೇವನು ರಕ್ಷಿಸಲಿ ಎಂದು ಹೇಳುತ್ತ ಅಗ್ನಿ ಪ್ರವೇಶ ಮಾಡಿದಳು.

ಅಗ್ನಿ ಪ್ರವೇಶ ಮಾಡಿದ ಮರುಕ್ಷಣದಲ್ಲಿ ಎಲ್ಲರೂ ನಿಬ್ಬೆರಗಾಗಿ ನೋಡುತ್ತಿರಲು, ಸೀತೆ ಅಗ್ನಿ ದೇವತೆಯೊಂದಿಗೆ ಹೊರಬಂದಳು. ರಾಮ ಈಗ ಸೀತೆಯನ್ನು ಬರಮಾಡಿಕೊಂಡ. ತನ್ನನ್ನು ಕ್ಷಮಿಸೆಂದು ಕೇಳಿಕೊಂಡ. ಲೋಕಾಪವಾದ ತಪ್ಪಿಸಲೆಂದು ಇಂತಹ ನಿಷ್ಠುರತೆಗೆ ತಾನು ಒಳಗಾಗ ಬೇಕಾಯಿತೆಂದು ಸಮರ್ಥಿಸಿಕೊಂಡ.

ಸ್ವರ್ಗದಿಂದಿಳಿದ ದಶರಥ, ಇಂದ್ರರು ರಾಮಸೀತೆಯರ ಸಂಯೋಗಕ್ಕೆ ಹರ್ಷಿಸಿದರು.



ದಶರಥ ಸೀತೆಯನ್ನು ಸಮಾಧಾನಪಡಿಸುತ್ತ, ತನ್ನ ಮಗ ರಾಮನಿಂದ ಆದ ಅಪರಾಧವನ್ನು ಕ್ಷಮಿಸುವಂತೆ ಕೇಳಿಕೊಂಡ.

ಇಂದ್ರ ರಾಮನನ್ನು, ಹರಸಿ, ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದ. ಆದರೆ ರಾಮ ತನಗಾಗಿ ಏನನ್ನೂ ಕೇಳಿಕೊಳ್ಳಲಿಲ್ಲ. "ದೇವ ನಿಮಗೆ ವರವನ್ನು ಕೊಡಲೇ ಬೇಕಿದ್ದರೆ, ಸಾವನ್ನಪ್ಪಿದ ವಾನರರನ್ನು ಬದುಕಿಸುವ ಕೃಪೆ ಮಾಡಿ" ಎಂದ. ಇಂದ್ರ ಹಾಗೆಯೇ ಮಾಡಿದ. ವಾನರರೆಲ್ಲರೂ ನಿದ್ದೆ ತಿಳಿದು ಎದ್ದವರಂತೆ ಎದ್ದರು. ತಮ್ಮವರೆಲ್ಲ ಮತ್ತೆ ಜೀವಂತವಾಗಿ ಎದ್ದು ಬಂದದ್ದು ನೋಡಿ ಸುಗ್ರೀವ, ಹನುಮಂತ, ಜಾಂಬವಂತ ಮೊದಲಾದವರಿಗೆ ಸಂತಸವಾಯಿತು.

ರಾಮ, ಲಕ್ಷ್ಮಣ, ಸೀತೆ, ವಿಭೀಷಣ, ಸುಗ್ರೀವ ಮೊದಲಾಗಿ ವಾನರರೆಲ್ಲರೂ ಅಯೋಧ್ಯೆಯ ಕಡೆಗೆ ಪುಷ್ಪಕ ವಿಮಾನಗಳಲ್ಲಿ ಪಯಣಿಸಿದರು. ಭರಧ್ವಾಜರ ಆಶ್ರಮದ ಬಳಿ ಇಳಿದು, ತಾವು ಬರುತ್ತಿರುವ ಸುದ್ದಿಯನ್ನು ಭರತನಿಗೆ ತಲುಪಿಸಿದರು.

ರಾಮನಿಗಾಗಿ ಕಾತುರದ ಕಣ್ಣುಗಳಿಂದ ಕಾಯುತ್ತಿದ್ದ ಭರತನಿಗೆ ಸುದ್ದಿ ಮುಟ್ಟಿದ್ದೇ, ಅಯೋಧ್ಯೆಯ ಜನರೆಲ್ಲರಿಗೂ ರಾಮಾಗಮನ ಸಂದೇಶವನ್ನು ತಲುಪಿಸಿದ. ಅಯೋಧ್ಯೆಗೆ ಅಯೋಧ್ಯೆಯೇ ಸಂಭ್ರಮೋತ್ಸಾಹದಲ್ಲಿ ತೇಲಾಡಿತು. ರಾಮನನ್ನು ಕಾಣುವುದಕ್ಕಾಗಿ ತುದಿಗಾಲ ಮೇಲೆ ನಿಂತಿದ್ದರು. ಅರಮನೆಯ ಮುಂದುಗಡೆ ದೊಡ್ಡ ಜನಸಾಗರವೇ ನೆರದಿತ್ತು.

ಪುಷ್ಪಕ ವಿಮಾನಗಳು ಬಂದು ಇಳಿದವು. ಎಲ್ಲರೂ ವಿಮಾನದಿಂದ ಹೊರಗೆ ಬಂದರು. ಎಷ್ಟೋ ವರ್ಷಗಳ ಅಗಲಿಕೆಯ ನಂತರದ ಸಮಾಗಮದ ಕ್ಷಣಗಳು ಮಾತಿಗೆ ಮೀರಿದ ಅನುಭವವಾಗಿತ್ತು.

ಭರತ ರಾಜ್ಯಭಾರದ ಜವಾಬ್ದಾರಿಯನ್ನು ಆದಷ್ಟು ಬೇಗ ರಾಮನಿಗೆ ಒಪ್ಪಿಸಲು ಆತುರ ತೋರಿದ. ಒಪ್ಪಿಸಿಕೊಳ್ಳಬೇಕೆಂದು ಅಣ್ಣನನ್ನು ಬೇಡಿಕೊಂಡ.

ಕುಲಗುರು ವಸಿಷ್ಠರು, ವಾಮದೇವಾದಿ ಪ್ರಮುಖ ಋಷಿಗಳೊಂದಿಗೆ ಚರ್ಚಿಸಿ ರಾಮನ ರಾಜ್ಯಾಭಿಷೇಕಕ್ಕೆ ಮುಹೂರ್ತವನ್ನು ಗೊತ್ತುಪಡಿಸಿದರು.

ನಿಶ್ಚಿತ ದಿನದಂದು ರಾಮ, ಸೀತೆಯರು ಮಂಗಳ ಸ್ನಾನಮಾಡಿ, ಕೆಲವು ವ್ರತ, ನೇಮಗಳನ್ನು ಪಾಲಿಸಿದರು. ಅವೆಲ್ಲ ಮುಗಿದ ಮೇಲೆ ಅಯೋಧ್ಯೆಯ ಪ್ರಜೆಗಳ ಸುತ್ತಮುತ್ತಲಿನ ದೇಶಗಳ ಅರಸರ, ಬ್ರಾಹ್ಮಣ ಶ್ರೇಷ್ಠರ, ಋಷಿಮುನಿಗಳ ಸಮಕ್ಷಮದಲ್ಲಿ ಅದ್ದೂರಿಯಾಗಿ ರಾಜ್ಯಾಭಿಷೇಕ, ಕಿರೀಟಧಾರಣ ಮಹೋತ್ಸವ ನೆರವೇರಿತು.

ಬಂದವರೆಲ್ಲರೂ ಅತಿಥಿ ಸತ್ಕಾರ, ಸಂಭಾವನೆ, ಉಡುಗೊರೆಗಳಿಂದ ಸಂಪ್ರೀತಗೊಂಡು ರಾಜದಂಪತಿಗಳನ್ನು ಬಾಯ್ತುಂಬ ಹರಸಿದರು. ರಾಮನನ್ನು ಸಾಕ್ಷಾತ್ ವಿಷ್ಣುವೆಂದೇ ಕೊಂಡಾಡಿದರು.



ಅಯೋಧ್ಯೆಯ ಅರಸನಾಗಿ ರಾಮ ನ್ಯಾಯ, ಧರ್ಮಗಳಿಂದ ರಾಜ್ಯಭಾರ ಮಾಡಿದ. ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಂಡ. ದೇಶವು ಸುಭಿಕ್ಷವಾಗಿತ್ತು. ಒಟ್ಟಿನಲ್ಲಿ ಅಯೋಧ್ಯೆ ಒಂದು ಆದರ್ಶ ರಾಷ್ಟ್ರ, ಕ್ಷೇಮಾಭಿವೃದ್ಧಿಯ ರಾಷ್ಟ್ರ ಎನಿಸಿಕೊಂಡಿತು.





ಈ ಕೃತಿಯನ್ನು ರಚಿಸಿದ ಡಾ. ವಿಜಯಾ ಸುಬ್ಬರಾಜ್ ಎಂ.ಇ.ಎಸ್. ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾಗಿರುವುದೇ ಅಲ್ಲದೆ ನಾಡಿನ ಖ್ಯಾತ ಲೇಖಕಿಯೂ ಆಗಿದ್ದಾರೆ. ಸಾಹಿತ್ಯ ಶಿಕ್ಷಣದಲ್ಲಿ ಅವರದೇ ಆದ ರೀತಿಯಲ್ಲಿ ಛಾಪು ಮೂಡಿಸಿದ್ದಾರೆ. ಮೂವತ್ನಾಲ್ಕು ವರ್ಷಕ್ಕೂ ಮೇಲ್ಪಟ್ಟು ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಇವರಿಗೆ 2002ರಲ್ಲಿ ಕರ್ನಾಟಕ ಸರಕಾರ ಕಾಲೇಜು ಶಿಕ್ಷಣ ಇಲಾಖೆ ವತಿಯಿಂದ 'ಆದರ್ಶ ಶಿಕ್ಷಕಿ' ಪ್ರಶಸ್ತಿ ಲಭಿಸಿದೆ.

ಕೇವಲ ಅಧ್ಯಾಪಕ ವೃತ್ತಿಗಷ್ಟೇ ಸೀಮಿತವಾಗದೆ ಕಾವ್ಯ, ನಾಟಕ, ವಿಮರ್ಶೆ, ಕತೆ, ಕಾದಂಬರಿ ಇತ್ಯಾದಿ ಹಲವಾರು ಸಾಹಿತ್ಯ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ತಮ್ಮ ಸಾಹಿತ್ಯ ಸಾಧನೆಗಾಗಿ ಹಲವಾರು ಪ್ರಶಸ್ತಿ, ಪುರಸ್ಕಾರಗಳನ್ನು ಪಡೆದಿದ್ದಾರೆ. ನಲವತ್ತಕ್ಕೂ ಹೆಚ್ಚು ಕೃತಿಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ.

ಸಾಹಿತ್ಯ ಶಿಕ್ಷಣವಷ್ಟೇ ಅಲ್ಲದೆ ರಂಗಭೂಮಿ, ಸಂಗೀತಗಳು ಅವರ ಕಾರ್ಯಕ್ಷೇತ್ರಗಳಾಗಿವೆ. ನಾಟಕ ರಚನೆ, ನಿರ್ದೇಶನ, ಅಭಿನಯ ಇವು ಮೂರೂ ಅವರ ಆಸಕ್ತಿಯ ವಲಯಗಳಾಗಿವೆ.

ಅವರ ನಿರಂತರ ಕ್ರಿಯಾಶೀಲತೆ, ಸೃಜನಶೀಲತೆಗಳಿಗೆ ಗೌರವ, ಪ್ರಶಸ್ತಿಗಳು ಹಲವಾರು ಇದ್ದರೂ, ಗೊರೂರು ಪ್ರಶಸ್ತಿ, ಮಲ್ಲಿಕಾ ಪ್ರಶಸ್ತಿ, ಕಡಂಗೋಡ್ಲು ಪ್ರಶಸ್ತಿ, ಪರ್ಲ್ ಪ್ರಶಸ್ತಿ, ನೀಲ ಗಂಗಾ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಎಂ.ಇ.ಎಸ್. ಕಾಲೇಜಿನ ರಜತೋತ್ಸವ ಪ್ರಶಸ್ತಿ ಮುಂತಾದವುಗಳನ್ನು ಮುಖ್ಯವಾಗಿ ಹೆಸರಿಸಬಹುದು.

ಅವರ ವಿದ್ಯಾರ್ಹತೆಯೂ ಸಾಮಾನ್ಯವಾದುದಲ್ಲ. ಕನ್ನಡದಲ್ಲಿ ಎಂಎ, ಪಿಎಚ್‌ಡಿ, ಇಂಗ್ಲಿಷಿನಲ್ಲಿ ಎಂಎ, 'ಲಾ' ಪದವಿ, ಫ್ರೆಂಚ್‌ನಲ್ಲಿ ಡಿಪ್ಲೋಮಾ, ಹಿಂದಿಯಲ್ಲಿ ಸಾಹಿತ್ಯ ರತ್ನ– ಹೀಗೆ ಬೆಳೆಯುತ್ತದೆ ಅವರ ವಿದ್ಯಾರ್ಹತೆಗಳು.

ಇಂತಹ ಪ್ರತಿಭಾಶೀಲ ವ್ಯಕ್ತಿ ನಮ್ಮ ಪ್ರಾರ್ಥನೆಯನ್ನೂ ಮನ್ನಿಸಿ ನಮಗಾಗಿ, ಮಕ್ಕಳಿಗಾಗಿ ಹಿಂದೂಧರ್ಮದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಕೃತಿಗಳನ್ನು ಕಥಾರೂಪದಲ್ಲಿ ಬರೆದುಕೊಟ್ಟಿದ್ದು ನಮ್ಮ ಅದೃಷ್ಟ. ಈ ಎರಡು ಕೃತಿಗಳಲ್ಲದೆ ನಮ್ಮ ಸಂಸ್ಕೃತಿ ಸಂಬಂಧವಾದ ಇನ್ನೂ ಹಲವಾರು ಕೃತಿಗಳನ್ನು ಬರೆದು ಕೊಡಲು ಒಪ್ಪಿದ್ದಾರೆ. ಅದಕ್ಕಾಗಿ ನಾವು ಅವರಿಗೆ ಎಂದೆಂದಿಗೂ ಋಣಿಯಾಗಿದ್ದೇವೆ. ನಮ್ಮ ಕೃತಿಮಾಲೆಯಲ್ಲಿ ಬಂದಿರುವ ಈ ರಾಮಾಯಣ ಕೃತಿ ಎಲ್ಲರಿಗೂ ಮೆಚ್ಚುಗೆಯಾಗುವುದೆಂಬ ಭರವಸೆ ಇದೆ.

ಬಿಡುವಿಲ್ಲದ ಅವರ ವೇಳೆಯನ್ನು ಈ ಕೃತಿ ರಚನೆಗೆ ಮತ್ತು ಇನ್ನೂ ಅನೇಕ ಕೃತಿಗಳಿಗೆ ಮೀಸಲು ಇಟ್ಟಿರುವುದಕ್ಕಾಗಿ ಅವರಿಗೆ ನಾನು ಹೃತ್ಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

– **ಪ್ರಕಾಶಕರು**

**₹80**

